

# ಬೀದರ ಜಿಲ್ಲೆಯ ಚುಟುಕು ಸಾಹಿತ್ಯ

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ
ಎಂ.ಫಿಲ್. ಅಂತಿಮ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

**ಸುವರ್ಣಾ ಚಂದ್ರಶೇಖರ**

ಸಂಶೋಧನ ಮಾರ್ಗದರ್ಶಕರು

**ಡಾ. ಶ್ರೀಶೈಲ ನಾಗರಾಳ**

ಎಂ.ಎ., ಎಂ.ಫಿಲ್., ಪಿ.ಎಚ್.ಡಿ.

ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ.






ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-[illegible].
ಸೆಪ್ಟೆಂಬರ್-೨೦೦೯





# ಬೀದರ ಜಿಲ್ಲೆಯ ಚುಟುಕು ಸಾಹಿತ್ಯ

(ಕ.ರಾ.ಶಿಕ.ಸಂಸ್ಥೆಯ ಸ್ನತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ
ಎಂ.ಫಿಲ್.ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)



ಸಂಶೋಧಕರು
ಸುವರ್ಣಾ ಚಂದ್ರಶೇಖರ

ಸಂಶೋಧನಾ ಮಾರ್ಗದರ್ಶಕರು
ಡಾ. ಶ್ರೀಶೈಲ ನಾಗರಾಳ
ಎಂ.ಎ.ಎಂ.ಫಿಲ್. ಪಿಎಚ್.ಡಿ.
ಕ.ರಾ.ಶಿ.ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನೆ ಕೇಂದ್ರ, ಬೀದರ



ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ – ೫೮೩[illegible]
ಸೆಪ್ಟೆಂಬರ –೨೦೦೯

## ಪ್ರಮಾಣ ಪತ್ರ

" ಬೀದರ ಜಿಲ್ಲೆಯ ಚುಟುಕು ಸಾಹಿತ್ಯ" ಎಂಬ ನಿಂಬಂದವನ್ನು ಡಾ॥ ಶ್ರೀಶೈಲ ನಾಗಾರಾಳ ಅವರ ಮರ್ಗಾದರ್ಶದನದಲ್ಲಿ ಸಿದ್ದಪಡಿಸಿ ಎಂ.ಫೀಲ್. ಪದವಿಗಾಗಿ ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು. ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ಸ್ಥಳ : ಬೀದರ

ದಿನಾಂಕ: 29/09/09

ಸುವರ್ಣಾ ಚಂದ್ರಶೇಖರ
ಎಂ.ಫೀಲ್, ವಿದ್ಯಾರ್ಥಿ
ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ ಕನ್ನಡ
ಸಂಶೋಧನ ಕೇಂದ್ರ ಬೀದರ.

## ಮಾರ್ಗದರ್ಶಕರ ಪ್ರಮಾಣ ಪತ್ರ.

" ಬೀದರ ಜಿಲ್ಲೆಯ ಚಟುಕು ಸಾಹಿತ್ಯ" ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸುವರ್ಣಾ ಚಂದ್ರಶೇಖರ ಅವರು ನನ್ನ ಮಾರ್ಗದರ್ಶದಲ್ಲಿ ಸಿದ್ದ ಪಡಿಸಿದ್ದಾರೆ ಪ್ರಸುತ್ತ ನಿಂಬಂಧವು ಮೂಲವಾಗಿದ್ದು. ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ ಃ **ಬೀದರ**

ದಿನಾಂಕಃ

ಡಾ॥ ಶ್ರೀಶೈಲ ನಾಗರಾಳ
ಎಂ.ಎ.ಎ.ಫಿಲ್. ಪಿ.ಎಚ್.ಡಿ
ಸಂಶೋಧನ ಮಾರ್ಗದರ್ಶಕರು
ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ
ಕನ್ನಡ ಸಂಶೋಧನ ಕೇಂದ್ರ ಬೀದರ

# ಪರಿವಿಡಿ

# ಅಧ್ಯಾಯ – 1 ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

1.1. ಅಧ್ಯಯನದ ಉದ್ದೇಶ

1.2 ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ

ಅಧ್ಯಾಯ : 1

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## 1.1 ಅಧ್ಯಯನದ ಉದ್ದೇಶ:

ಸಾವಿರ ವರ್ಷಗಳಿಗೂ ಮೇಲ್ಪಟ ಕನ್ನಡ ಸಾಹಿತ್ಯ ಚರಿತ್ರೆಯನ್ನು ಪ್ರಾಚೀನ ಮತ್ತು ಆಧುನಿಕ ಎಂದು ವಿಭಾಗ ಮಾಡಿ ಅಧ್ಯಯನ ಮಾಡುತ್ತ ಬರಲಾಗಿದೆ. ಸಾಮಾನ್ಯವಾಗಿ ಹತ್ತನೇ ಶತಮಾನದ ಪಂಪನಿಂದ ಇಪ್ಪತ್ತನೇ ಶತಮಾನದ ಆರಂಭದಲ್ಲಿನ ಮುದ್ದಣನ ವರೆಗಿನ ಸಾಹಿತ್ಯಕ್ಕೆ ಪ್ರಾಚೀನ ಸಾಹಿತ್ಯವೆಂತಲೂ, ಮುದ್ದಣನ ನಂತರದ ಈ ತನಕದ ಸಾಹಿತ್ಯಕ್ಕೆ ಹೊಸಗನ್ನಡ ಸಾಹಿತ್ಯವೆಂತಲು ಕರೆಯಲಾಗುತ್ತದೆ ಈ ಎರಡೂ ಘಟ್ಟದ ಸಾಹಿತ್ಯದ ಮೇಲೆ ತುಂಬ ವಿಭಿನ್ನ ಪ್ರಭಾವ ಪ್ರೇರಣೆಗಳಾಗಿರುವುದನ್ನು ಸಾಹಿತ್ಯ ಚರಿತ್ರೆಯಲ್ಲಿ ಉಲ್ಲೇಖಿಸಲ್ಪಟ್ಟಿದೆ ಈ ಸುದೀರ್ಘವಾದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಹೊಸಗನ್ನಡವು ತುಂಬ ವಿಶಿಷ್ಟವಾಗಿದೆ. ಅದು ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಪಾಶ್ಚಾತ್ಯ ಸಾಹಿತ್ಯದ ಅನೇಕ ಪ್ರೇರಣೆ, ಪರಿಕರಗಳನ್ನು ಸ್ವೀಕರಿಸಿಯೂ, ತನ್ನದೇ ಆದ ಅಭಿವ್ಯಕ್ತಿಯಲ್ಲಿ ಹೊಸ ಹೊಸ ಮಜಲುಗಳನ್ನು ಸೃಷ್ಟಿಸುತ್ತ ಸ್ವತಂತ್ರವಾಗಿ ಮತ್ತು ಶ್ರೀಮಂತವಾಗಿ ಬೆಳೆದಿದೆ, ಬೆಳೆಯುತ್ತಿದೆ.

ಹೊಸಗನ್ನಡ ಸಾಹಿತ್ಯಕ್ಕೆ ಸುಮಾರು ಎಂಟು ದಶಕಗಳ ಚರಿತ್ರೆಯಿದೆ. ಈ ಅವಧಿಯಲ್ಲಿ ಅದು ನವೋದಯ, ಪ್ರಗತಿಶೀಲ, ನವ್ಯ, ದಲಿತ–ಬಂಡಾಯ ಹಾಗೂ ಇಂದಿನ ಬಂಡಾಯೋತ್ತರಗಳೆಂಬ ಹೆಸರುಗಳಲ್ಲಿ ಬೆಳೆದು ತನ್ನ ಸ್ವರೂಪವನ್ನು ವಿಸ್ತರಿಸಿಕೊಂಡಿದೆ ಹೊಸಗನ್ನಡ ಸಾಹಿತ್ಯದಲ್ಲಿನ ಇವುಗಳನ್ನು ಸಾಹಿತ್ಯಕ ಘಟ್ಟಗಳೆಂತಲೂ, ಪಂಥಗಳೆಂತಲೂ, ಚಳುವಳಿಗಳೆಂತಲೂ ಕರೆಯುವ ರೂಢಿಯಿದೆ. ಈ ಎಲ್ಲ ಚಳುವಳಿಗಳು ಒಂದರ ವಿರುದ್ಧ ಪ್ರತಿಭಟಿಸಿಯೇ ಹುಟ್ಟುವವುಗಳಾಗಿವೆ. ಹೀಗಾಗಿ ಈ ಚಳುವಳಿಗಳು ತಮ್ಮದೇ ಆದ ಸೈದ್ಧಾಂತಿಕ ಒಲವು – ನಿಲುವುಗಳನ್ನು ಹೊಂದಿರುವವು. ಈ ಚಳುವಳಿಗಳು ಕನ್ನಡ ಸಾಹಿತ್ಯಕ್ಕೆ ಅನೇಕ ಪ್ರತಿಭಾವಂತ ಕವಿ ಬರಹಗಾರರನ್ನು ಕೃತಿಗಳನ್ನು ರೂಪಗಳನ್ನು ಕೊಡುಗೆಯಾಗಿ ನೀಡಿದೆ. ನಿಜವಾಗಿ ಹೊಸಗನ್ನಡ ಸಂದರ್ಭವನ್ನು ಹೊರತು ಪಡಿಸಿದರೆ, ಕನ್ನಡ ಸಾಹಿತ್ಯದ ಬೇರೆಯಾವ ಕಾಲದಲ್ಲು ಇಷ್ಟೊಂದು ಪ್ರಮಾಣದ ಕವಿ, ಬರಹಗಾರರನ್ನು ಕಾಣಲಾರೆವು ಈ ಕಾಲದ ಪ್ರತಿಭಾವಂತ ಕವಿ ಬರಹಗಾರರ ಪ್ರತಿಭಾ ಮೂಸೆಯಿಂದ ಸಾಹಿತ್ಯ ಪ್ರಕಾರಗಳಾದ ಕಾವ್ಯ, ಖಂಡಕಾವ್ಯ, ಮಹಾಕಾವ್ಯ ಸಣ್ಣ ಕಥೆ, ಕಾದಂಬರಿ, ನಾಟಕ , ಜೀವನ ಚರಿತ್ರೆ, ಪ್ರಬಂಧ, ಪ್ರವಾಸ ಕಥನ, ವೈಚಾರಿಕ, ವಿಮರ್ಶೆ, ಸಂಶೋಧನೆ ಹೀಗೆ ಮುಂತಾದವುಗಳಿಂದ ಹೊಸಗನ್ನಡ ಸಾಹಿತ್ಯ ಸಮೃದ್ಧವಾಗಿದೆ. ಈ ಸಮೃದ್ಧಿಗೆ

ಬೀದರ ಜಿಲ್ಲೆಯ ಚುಟುಕು ಸಾಹಿತ್ಯದ ಕೊಡುಗೆಯೂ ಅಪಾರವಾಗಿ ಸಂಧಿದೆ ಎನ್ನಬೇಕು.

ಹೊಸಗನ್ನಡ ಸಾಹಿತ್ಯ ಪ್ರಕಾರಗಳಲ್ಲಿಯೇ ಕಾವ್ಯವು ತುಂಬ ವಿಶಿಷ್ಟ ಹಾಗೂ ಪರಿಣಾಮಕಾರಿ ರೂಪವಾಗಿದೆ. ಅನುಭವಗಳನ್ನು ಜೀವನ ಪ್ರೀತಿಯಿಂದ ಪರಿಣಾಮಕಾರಿಯಾಗಿ ದಾಖಲಿಸಿಕೊಡುವ ಅತ್ಯಂತ ಸೂಕ್ಷ್ಮ ಮಾಧ್ಯಮವಾಗಿದೆ. ಅಂತೆಯ ಆಶೋತ್ತರಗಳಿಗೆ ಆಯಾ ಕಾಲದ ಸಾಹಿತ್ಯವು ಸ್ಪಂದಿಸುತ್ತ ಬಂದಿದೆಯೆಂಬುದಕ್ಕೆ ಕಾವ್ಯ ಉತ್ತಮ ಉದಾಹರಣೆಯಾಗುತ್ತದೆ. ಹತ್ತನೆಯ ಶತಮಾನದಿಂದ ಇಂದಿನ ವರೆಗಿನ ಸಾಹಿತ್ಯ ಚರಿತ್ರೆಯನ್ನು ಅವಲೋಕನ ಮಾಡಿದರೆ ಅಲ್ಲೆಲ್ಲ ಗದ್ಯಕಿಂತಲೂ ಪದ್ಯ ರೂಪವೇ ಹೆಚ್ಚಿನ ಪ್ರಮಾಣದಲ್ಲಿ ರಚನೆಯಾಗಿದ್ದು ಕಂಡುಬರುತ್ತದೆ. ಈ ಕಾವ್ಯಕ್ರಿಯೆ ಎನ್ನವುದೇ ತುಂಬಾ ವಿಚಿತ್ರ ಹಾಗೂ ಅದ್ಭುತವಾದುದು. ಕಾವ್ಯಕ್ಕೆ ಒಲಿಯದವರನ್ನು ಕಾಣುವುದು ವಿರಳ. ಅದು ಅಷ್ಟೇ ಸುಂದರ ರಸಗ್ರಹಣಕ್ಕೆ ಸಂಕೇತವಾದದು. ಸೃಷ್ಟಿಯ ರಹಸ್ಯದಷ್ಟೇ ಅದ್ಭುತವೂ ರಮ್ಯವೂ ಈ ಕಾವ್ಯ ರಹಸ್ಯವಾಗಿದೆ ಎಕೆಂದರೆ ಕಾವ್ಯವು ಒಂದು ಸೃಷ್ಟಿಯಾಗಿರುತ್ತದೆ. ಬೀಜದಿಂದ ವೃಕ್ಷವಾಗುವಂತೆ ಕವಿಯ ಜೀವನಾನುಭವವೆಂಬ ಬೀಜದಿಂದ ಕಾವ್ಯ ಹುಟ್ಟುತ್ತದೆ. ಕವಿ ತನ್ನ ಅನುಭಗಳಿಗೆ ಪ್ರತಿಭೆಯ ಎರಕ ಹೊಯ್ದು ಕಾವ್ಯ ಕಟ್ಟಬಲ್ಲ ನಿಪುಣ ಅದಕ್ಕೆಂದೆ ಕಾವ್ಯ ವಿಮಾಂಸೆಯಲ್ಲಿ ಕವಿ" ತಸ್ಯ ಕರ್ಮ: ಕಾವ್ಯ ಎಂಬ ಮಾತು ಹೇಳಲಾಗಿದೆ ನಮ್ಮ ಕವಿಗಳು ಕಾವ್ಯವನ್ನು ಜೀವನ ಯೋಗಕ್ಕೆ, ಜೀವನ ಪವಾಡಕೆ ಹೋಲಿಸಿ ಹೇಳಿದ್ದಿದೆ: ವರಕವಿ ಬೇಂದ್ರೆಯವರೇ ಒಂದು ಕಡೆ "ಕವಿ ಜೀವಕ್ಕೆ ಒಂದು ಹೂತ ಹುಣಸೀಯ ಜೀಜ ಸಾಕು " ಎಂದಿರುವರು. ಆದ್ದರಿಂದ ಬದುಕು ಮತ್ತು ಕಾವ್ಯ ಇವೆರಡೂ ಜೀವನ ಸಂಬಂಧಿಯೇದ ಕ್ರಿಯೇಗಳಾಗಿವೆ ಎಂದು ಹೇಳಬಹುದು ಆದ್ದರಿಂದ ಜೀವನಾನುಭವದಿಂದ ಕಟ್ಟಿದ ಕಾವ್ಯ ತುಂಬ ಪರಿಣಾಮಕಾರಿಯಾಗಿರುತ್ತದೆ. ಕಾವ್ಯವನ್ನು ಓದಿದಷ್ಟು ಸಲಕ್ಕೂ ಅದು ಅನೇಕ ಹೊಸ ಹೊಸ ಅರ್ಥವಲಯಗಳ ದರ್ಶನ ಮಾಡಿಸುತ್ತ ಹೋಗುತ್ತದೆ. ಅಂತೇಯೇ ಆದಿ ಕವಿ ಪಂಪನ ಕಾವ್ಯವನ್ನು ನಿಚ್ಚಂ ಪೊಸತು ನೀಡುವುದು ಎಂದಿರುವನು. ಕಾವ್ಯರಚನೆ ಮೂಲತಃ ಕವಿಗೆ ಅಂತರಂಗದ ಖುಷಿಯಾದರೆ, ಕಾವ್ಯಭ್ಯಾಸಿಗೆ ಅದೊಂದು ಮಾನಸಿಕ ರುಚಿಯಾಗಿ ಪಾಲ್ಗೊಳ್ಳುತ್ತದೆ. ಜೀವನ ವಿವೇಚನೆಯ ಪಾತಳಿಯಾಗುತ್ತದೆ. ಹೀಗೆ ಇನ್ನೂ ಅನೇಕ ಕಾರಣಗಳೂ ಕಾವ್ಯಭ್ಯಾಸದ ಹಿನ್ನಲೆಯಾಗಿರುತ್ತದೆ. ಮುಂಚಿನನಿಂದಲೂ ಕಾವ್ಯದ ಬಗೆಗೆ ಆಸಕ್ತಳಾಗಿದ್ದ ನನಗೆ ಕಾವ್ಯ ಕುರಿತು ಅಧ್ಯಯನ ಮಾಡುವುದಕ್ಕೆ ಮುಂದಾಗ ನಗೆ ಬೀದರ ಜಿಲ್ಲೆಯ ಚುಟುಕು ಸಾಹಿತ್ಯ ನನ್ನ ಗಮನಕ್ಕೆ ಬಂದಿತು. ನನ್ನ ಜಿಲ್ಲೆಯ ಅಲ್ಲಲ್ಲಿ ಬಿಡಿ ಬಿಡಿಯಾಗಿ ಕವಿಗಳ ಬಗೆಗೆ ಕಾವ್ಯಗಳ ಬಗೆಗೆ ಅಷ್ಟಿಷ್ಟು ಸಂಶೋಧನಾಧ್ಯಾಯನ ನಡೆದಿರುವುದಾದರೆ ಇಡಿಯಾದ ಜಿಲ್ಲೆಯ ಚುಟುಕು ಕಾವ್ಯ ಅದರಿಂದ ಹೊರಗುಳಿದ್ದರು ತಿಳಿದು ಬಂದಿತು ಆದ್ದರಿಂದ ಪ್ರಸ್ತುತ ಬೀದರ ಜಿಲ್ಲೆಯ ಚುಟುಕು ಸಾಹಿತ್ಯವನ್ನು ಅಧ್ಯಯನ ಮಾಡುವ ಉದ್ದೇಶವನ್ನು ಈ ಪ್ರಬಂಧ ಹೊಂದಿದೆ.

## 1.2 ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ

ಕರ್ನಾಟಕದ ಉತ್ತರ ತುತ್ತತುದಿಯಲ್ಲಿರುವ ಬೀದರ ಜಿಲ್ಲೆಗೆ ತನ್ನದೇ ಆದ ಐತಿಹಾಸಿಕ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ವೈಶಿಷ್ಟ್ಯತೆಯಿದೆ. ಈ ವೈಶಿಷ್ಟ್ಯತೆಗೆ ಅಲ್ಲಿನ ಪ್ರಾಕೃತಿಕ , ಧಾರ್ಮಿಕ, ಸಾಮಾಜಿಕ, ರಾಜಕೀಯ , ಭಾಷಿಕ ಪರಿಸರಗಳೂ ಕಾರಣವಾಗಿವೆ. ಇವೆಲ್ಲವುಗಳನ್ನು ಮೈಗೂಡಿಕೊಂಡು ಬೆಳೆದ ಜಿಲ್ಲೆಯ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ತನ್ನದೇ ಆಧ ಕೊಡುಗೆಯನ್ನು ನೀಡಿದೆ. ಸಾಂಸ್ಕೃತಿಕ ಪರಂಪರೆಯ ಉಸಿರಾಗಿಯೇ ಮೂಡಿಬಂದ ಜಿಲ್ಲೆಯ ಸಾಹಿತ್ಯವನ್ನು ಪ್ರಾಚೀನ, ಮಧ್ಯಕಾಲೀನ ಹಾಗೂ ಆಧುನಿಕ ಎಂದು ವಿಭಾಗ ಮಾಡಿ ನೋಡಲಾಗುವುದು ಈ ವಿಭಾಗಕ್ರಮವು ಅಧ್ಯಯನದ ದೃಷ್ಟಿಯಿಂದ ಸಾಧುವೂ ಹೌದು .

ಜಿಲ್ಲೆಯ ಸಾಹಿತ್ಯಿಕ ಇತಿಹಾಸ ಸಾವಿರಾರು ವರ್ಷಗಳಷ್ಟು ಪ್ರಾಚೀನವಾಗಿದೆ ಪಂಪ ಪೂರ್ವ ಕಾಲದ್ದು ಎನ್ನಲಾದ ಶಿವಕೋಟ್ಯಾಚಾರ್ಯನ ವಡ್ಡಾರಾಧನೆ ಇಲ್ಲಿಯೇ ರಚನೆಯಾದದ್ದು ಎನ್ನಲಾಗುತ್ತದೆ 12ನೇ ಶತಮಾನದ ವಚನ ಸಾಹಿತ್ಯ ರಚನೆಗೆ ಇದು ಕನ್ಯನೆಲವೇ ಆಗಿದ್ದನ್ನು ಬಲ್ಲೆವು ತತ್ವಪದ ಅನುಭಾವ ಸಾಹಿತ್ಯ ಜನಪದ ಸಾಹಿತ್ಯದಿಂದ ಜಿಲ್ಲೆಯ ಸಾಹಿತ್ಯ ಚರಿತ್ರೆ ಮಹತ್ವವನ್ನು ಮನಗಾಣುವೆವು.

ಪ್ರಾಚೀನ ಸಾಹಿತ್ಯವನ್ನು ಹೊರತು ಪಡಿಸಿ ಹೇಳುವುದಾದರೆ ಹೊಸಗನ್ನಡ ಸಾಹಿತ್ಯಕ್ಕೂ ಜಿಲ್ಲೆಯ ಕೊಡುಗೆ ಅನನ್ಯವಾಗಿದೆ. ಹೊಸಗನ್ನಡದ ಎಲ್ಲ ಸಾಹಿತ್ಯಿಕ ಘಟ್ಟಗಳಿಗೆ ಜಿಲ್ಲೆಯ ಕವಿಗಳು ಸ್ಪಂದಿಸಿ ಆಯಾಚಳುವಳುವಳಿಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡು ಅವುಗಳ ಸೈದ್ಧಾಂತಿಕ ನಿಲುವುಗಳನ್ನು ಕಾವ್ಯದಲ್ಲಿ ಪ್ರಕಟಿಸುತ್ತ ಬಂದಿರುವರು ಹೊಸಗನ್ನಡದ ನವೋದಯದ ಕಾಲದಿಂದಲೂ ಈ ಹೊತ್ತಿನ ಬಂಡಾಯೋತ್ತರ ಕಾಲದವರೆಗೆ ಕವಿಗಳು ತಮ್ಮ ದೀರ್ಘವೆನ್ನಬಹುದಾದ ಕವಿತೆಗಳ ಜೊತೆಗೆ ಚುಟುಕು ಕವಿತೆಗಳನ್ನೂ ರಚಿಸಿದ್ದಾರೆ. ಒಮ್ಮೊಮ್ಮೆ ದೀರ್ಘ ಕವಿತೆಗಳಲ್ಲಿ ಹೇಳುಲಾಗದಿದ್ದ ಭಾವನೆಗಳನ್ನು ಚುಟುಕುಗಳಲ್ಲಿ ಪೂರ್ಣಗೊಳಿಸಿದ್ದದೆ "ಕಿಲದರೋಳ ಓಂಥರ್ಥ ಚಲಕಂ" ಎಂಬಂತೆ ಚಿಕ್ಕ ಚಿಕ್ಕ ಬಂಧಗಳಲ್ಲಿ ಅಭಿವ್ಯಕ್ತಿಸಿ ತಮ್ಮ ಅನುಭಗಳಿಗೆ ಪರಿಣಾಮಕಾರಿ ಶಕ್ತಿ ತುಂಬಿ ಸಾಹಿತ್ಯ ಹಾಗೂ ಸಾಂಸ್ಕೃತಿಕ ವಿಶಿಷ್ಟತೆಗೆ ಕಾರಣರಾಗಿದಾರೆ ಈ ಹಿನ್ನಲೆಯಲ್ಲಿ ಚುಟುಕು ಕವಿಗಳ ಕವಿತೆಗಳನ್ನು ಬಹುಮುಖಿ ಶಿಸ್ತುಗಳ ನೆಲೆಯಲ್ಲಿ ಅಧ್ಯಯನ ಕೈಕೊಳ್ಳಲಾಗಿದೆ ಈ ಎಲ್ಲ ಕಾರಣಗಳನ್ನು ಗಮನದಲ್ಲಿರಿಸಿಕೊಂಡು ನಿಬಂಧದ ಸ್ವರೂಪ ಮತ್ತು ವ್ಯಾಪ್ತಿಯನ್ನು ಇಲ್ಲಿ ಏಳು ಅಧ್ಯಾಯಗಳಲ್ಲಿ ವಿಗಂಡಿಸಿಕೊಳ್ಳಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿಯನ್ನು ಕುರಿತು ವಿವರಿಸಲಾಗಿದೆ. ಯಾವುದೇ ವಿಷಯವನ್ನು ಅಧ್ಯಯನ ಮಾಡಬೇಕಾದರೆ, ಅಧ್ಯಯನದ ಉದ್ದೇಶ ಮತ್ತು ಸ್ವರೂಪ ನಿರ್ಣಯಿಸಿಕೊಳ್ಳುವುದು ಅತ್ಯಂತ ಅವಶ್ಯಕವಾಗಿರುತ್ತದೆ ಅದು ಪ್ರಬಂದಕ್ಕೊಂದು ಪಾತಳಿಯನ್ನು ಶಿಸ್ತುನ್ನು ಒದಗಿಸುವುದು ಅಂತೆಯೆ, ಇಲ್ಲಿ ಬೀದರ ಜಿಲ್ಲೆಯ ಚುಟುಕು ಸಾಹಿತ್ಯದ ಬೆಳವಣಿಗೆ ಅವುಗಳ ಅಧ್ಯಯನದ ಉದ್ದೇಶ, ಮಹತ್ವವನ್ನು ಮನಗಾಣಿಸಲಾಗಿದೆ .

ಅಧ್ಯಾಯ ಎರಡು ಬೀದರ ಜಿಲ್ಲೆಯ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಪರಂಪರೆ ಕುರಿತಾಗಿದೆ ಕರ್ನಾಟಕದ ವಲಕುಟ ಮಣಿಯೆನಿಸಿದ ಬೀದರ ಜಿಲ್ಲೆಗೆ ಸಾವಿರಾರು ವರ್ಷಗಳ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಭವ್ಯ ಪರಂಪರೆಯಿದೆ. ಪ್ರಾಚೀನ ಕಾಲದಿಂದಲೂ ಜಿಲ್ಲೆ ಧಾರ್ಮಿಕ, ಸಾಮಾಜಿಕ, ರಾಜಕೀಯ, ಭಾಷಿಕ ಸಮನ್ವಯತೆ ಮರೆದಿದೆ ಜೈನ, ವೀರಶೈವ ಇಸ್ಲಾಂ ಶಿಖ್, ಸಫಿ ಮುಂತಾದ ಧರ್ಮಗಳ ಆಂಡಬೋಲವಾಗಿರುವ ಬೀದರ ಜ್ಞಾನ ಜೋತಿಗೆ ಭಕ್ತಿಯ ತೈಲವೆರೆದು ಕಲ್ಯಾಣದ ಪ್ರಣತೆಗೆ ಕ್ರಿಯೆಯ ಬತ್ತಿ ಯಾಗಿರುವ ಭೂಮಿ ಜಿಲ್ಲೆಯಲ್ಲಿ ಆಳಿದ ಶಾತವಾಹನ, ಚಾಲುಕ್ಯ, ರಾಷ್ಟ್ರಕೂಟ, ಕಲಚೂರಿ, ಬಹುಮನಿ, ಯಾದವ, ನಿಜಾಮ ಮನೆತಗಳು ಅಲ್ಲದೆ ಸಣ್ಣ ಪುಟ್ಟ ಪಾಳೆಯಗಾರರಾದ ಹೈಹಯ ರಂಜೇರಿನ ಸಿಂಧರು ಮೊದಲಾದವರು ಶತಮಾನಗಳಿಂದ ಆಳಿಕೆ ನಡೆಸುತ್ತ ಇಲ್ಲಿನ ಕಲೆ, ವಾಸ್ತು, ಶಿಲ್ಪ, ಸಾಹಿತ್ಯ ಸಂಗೀತ ಕ್ಷೇತ್ರಗಳಿಗೆ ತೆಲುಗು, ಮರಾಠಿ, ಉರ್ದು, ಮೋಡಿ, ಹಿಂದಿ, ಪಂಜಾಬೀ, ಪರ್ಶಿಯನ್, ಇಂಗ್ಲೀಷ ಭಾಷೆಗಳ ಪ್ರಭಾವಕ್ಕೊಳಪಟ್ಟಿರುವ ಜಿಲ್ಲೆಯು ಅವೆಲ್ಲ ಪ್ರಭಾವಗಳನ್ನು ತನ್ನೊಳಗೆ ಮಾಡಿಕೊಂಡು ಸಮೃದ್ಧ ಸಾಹಿತ್ಯ ನಿರ್ಮಾಣಕ್ಕೆ ಕಾರಣವಾಗಿರುವ ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ. ಅಧ್ಯಾಯ ಮೂರು ಬೀದರ ಜಿಲ್ಲೆಯ ಚುಟುಕು ಕವಿಗಳ ಸಮೀಕ್ಷೆ ಹೊಂದಿದೆ.

ಒಂದು ಕಾಲಕ್ಕೆ ವಚನ ಸಾಹಿತ್ಯ ತತ್ವಪದ ಸಾಹಿತ್ಯವನ್ನು ಕೊಟ್ಟ ಬೀದರ ಜಿಲ್ಲೆ 20 ನೇ ಶತಮಾನದ ಆರಂಭದಲ್ಲಿ ಕಾಣಿಸಿಕೊಂಡು ಹೊಸಗನ್ನಡ ಕಾವ್ಯಕ್ಕೆ ತೀರ ತಡವಾಗಿ ಸ್ಪಂದಿಸಿತು. ಇದಕ್ಕೆ ಅದರದೇ ಆದ ರಾಜಕೀಯ ಕಾರಣಗಳಿದ್ದವು, ಹೈದ್ರಾಬಾದಿನ ನಿಜಾಮರ ಆಳ್ವಿಕೆಗೊಳಪಟ್ಟಿದ ಈ ಜಿಲ್ಲೆಯಲ್ಲಿ ಶಿಕ್ಷಣ ಹಾಗೂ ದೈನಂದಿನ ವ್ಯವಹಾರಗಳಲ್ಲಿ ಉರ್ದು, ಮರಾಠಿ, ಭಾಷೆಗಳದೇ ಮೇಲುಗೈಯಾಗಿತ್ತು, ಉಳಿದೆಡೆಯಲ್ಲಿ ಸಾಹಿತ್ಯಿಕ್ಕ ಚಟುವಟಿಕೆಗಳು ಮೈದುಂಬಿಕೊಂಡು ನಡೆದಿರುವ ಹೊತ್ತಿನಲ್ಲಿ ಇಲ್ಲಿನವರು ಕನ್ನಡ ಭಾಷೆಯ ಶಿಕ್ಷಣಕ್ಕಾಗಿ ಹೋರಾಡುತ್ತುದ್ದರು ಇಂಥ ಪರಸ್ಥಿಯಲ್ಲಿ ಇಲ್ಲಿ ಹೊಸಗನ್ನಡ ಕಾವ್ಯ ಕೊಂಚ ತಡವಾಗಿಯೇ ಪ್ರಾರಂಭಗೊಂಡಿತು ಎಂದು ಹೇಳಬಹುದು.

ಸುಮಾರು 60ರ ದಶಕಗಳಿಂದ ಇಲ್ಲಿ ಹೊಸಗನ್ನಡ ಕವಿತೆಗಳು ಸಂಕಲನ ರೂಪ ತಾಳಿ ಹೊರಬಂದವೆಂದು ಹೇಳಲಾಗುತ್ತದೆ. ಬಿ.ಜಿ ಸಾಜಿ ಬಸವರಾಜ ಸೈನೀರ್ ಮಾಣಿಕರಾವ ಧನಶ್ರೀ

ಮುಂತಾದ ಹಿರಿಯರು ಕವಿತೆಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿ. ಜಿಲ್ಲೆಯಲ್ಲಿ ಕಾವ್ಯ ರಚನೆ ಹಾಗೂ ಪ್ರಕಟನೆಗೆ ಪ್ರೋತ್ಸಾಹಿಸಿದರು ನಂತರ ಜಿಲ್ಲೆಯ ತರುಣ ಕವಿಗಳು ತಮ್ಮ ಕವನ ಸಂಕಲನಗಳನ್ನು ಉತ್ಸಹದಿಂದಲೇ ಪ್ರಕಟಿಸಲಾರಂಭಿಸಿದರು ಅವರುಗಳಲ್ಲಿ ದೇಶಾಂಶ ಹುಡುಗಿ ಎಂ.ಜಿ. ಗಂಗನಪಳ್ಳಿ ಕಾಶಿನಾಥ ಅಂಬಲಗಿ ಬಾಬು ಪೂಜಾರ ಸೂಂಗಯ್ಯ ಹಿರೇಮಠ ಪ್ರೇಮಾ ಸಿರ್ಸೆ, ವಿಜಯಶ್ರೀ ಸಬರದ ವಿಕ್ರಮ ವಿಸಾಜಿ ವಿಶಾಲಾಕ್ಷಿ ಕರಡಿ ಹಂಸಕವಿ ಮ.ಮಾ ಬೋರಾರಕರ, ಮಲ್ಲಿಕಾರ್ಜುನ ಆಮ್ಲೆ ಜಯದೇವಿ ಗಾಯಕವಾಡ ಮುಂತಾದವರು ಕಾವ್ಯ ರಚನೆಗೆ ತೊಡಗಿಸಿ ಕೊಂಡಿರುವರು ಇವರಲ್ಲಿ ಕೆಲವರು ಚುಟುಕು ಕವಿತೆಗಳನ್ನು ಬರೆದು ಹೆಸರು ಮಾಡಿದ್ದಾರೆ ಅಂಥ ಕವಿಗಳ ಸಾಧನೆ ಅವರ ಕವಿತೆಗಳ ಮಹತ್ವ ಕೊಡುಗೆಗಳನ್ನು ಕುರಿತು ಅಧ್ಯಾಯದಲ್ಲಿ ಸಮೀಕ್ಷಿಸಲಾಗಿದೆ.

ಅಧ್ಯಾಯ ನಾಲ್ಕು ಜಿಲ್ಲೆಯ ಚುಟುಕು ಕವಿತೆಗಳನ್ನು ಬಹುಮುಖ ನೆಲೆಯಿಂದ ಅಧ್ಯಯನ ಮಾಡಲಾಗಿದೆ ಪ್ರಮುಖವಾಗಿ ಪ್ರಕೃತಿ ಸಮಾಜ ಪ್ರೀತಿ, ವಿಡಂಬನೆ ಹಾಗೂ ಸಾಹಿತ್ಯಿಕ ಅಂಶಗಳನ್ನು ಇಲ್ಲಿ ಪ್ರಧಾನ ನೆಲೆಯಾಗಿಸಿ ಕೊಂಡು ಚುಟುಕುಗಳನ್ನು ನೋಡಲಾಗಿದೆ. ಪ್ರತಿ ಕಾಲ ಘಟ್ಟದ, ಪ್ರತಿಯೊಬ್ಬ ಕವಿಯೂ ತನ್ನ ಬದುಕಿನ ಮೂಲ ಭೂತ ದ್ರವ್ಯಗಳ ಬಗೆಗೆ, ಅದರ ಘಟಕಗಳ ಬಗೆಗೆ, ಅವುಗಳನ್ನು ಚಲನಶೀಲ ಗೊಳಿಸುವ ಚೇತನಗಳ ಬಗೆಗೆ ಚಿಂತಿಸಿಯೇ ಇರುತ್ತಾನೆ. ಈ ಚಿಂತನೆಗಳು ಕವಿಯ ವಿಶಿಷ್ಟತೆಗೂ ಕಾರಣವಾಗಿ ಆತನನ್ನು ಗುಂಪಿನಿಂದ ಪ್ರತ್ಯೇಕ ಗೊಳಿಸಿ ಹೆಚ್ಚು ಮುಖ್ಯನಾಗುವಂತೆ ಮಾಡುತ್ತಾವೆ. ಒಬ್ಬ ಕವಿ ಹೆಚ್ಚು ಮುಖ್ಯಾನಾಗುತ್ತ ಹೋದಂತೆ ಆತನ ಕಾವ್ಯದ ಮೂಲಭೂತ ಕಾಳಜಿಗಳು ಕ್ರಮ ಕ್ರಮೇಣ ಆಳಕ್ಕಿಳಿದು ಅಗಲಕ್ಕೆ ಹರಡಿ ಮೇಗಿ ಹರಳುಗಟ್ಟಿ ಇನ್ನಷ್ಟು ಅಭ್ಯಾಸಯೋಗ್ಯ ವನ್ನಾಗಿಸುತ್ತವೆ. ಆದುದರಿಂದ ಕವಿಯ ಬದುಕಿನ ಮೂಲ ಭೂತ ಕಾಳಜಿಗಳಾದ ಪ್ರಕೃತಿ–ಸಮಾಜ– ಪ್ರೀತಿ ವ್ಯಕ್ತಿ ವಿಡಂಬನೆಗಳನ್ನು ಬಹುಮುಖಿ ನೆಲೆಗಳಲ್ಲಿ ಪ್ರಧಾನವಾಗಿ ಪರಾಮರ್ಶಿಸಲಾಗಿದೆ ವಿಶೇಷವೆಂದರೆ ಇಂಥ ಚಿಂತನೆಗಳಲ್ಲದ ಒಬ್ಬನೇ ಒಬ್ಬ ಕವಿಯ ನಮಗೆ ಕಾಣವುದೇ ಇಲ್ಲ ಕಾವ್ಯ ಬದುಕಿನ ಧ್ಯಾನವಾಗಿ ಶೋಧನೆಯಾಗಿ ಮೂಡಿ ಬಂದಿರುವುದನ್ನು ಇಲ್ಲಿ ನೋಡಲಾಗಿದೆ.

ಅಧ್ಯಾಯ ಐದರಲ್ಲಿ ಜಿಲ್ಲೆಯ ಚುಟುಕು ಕವಿತೆಗಳ ಭಾಷೆಶೈಲಿ – ಛಂದೊ ಪ್ರಯೋಗಳ ವಿಶೇಷತೆಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ ಕನ್ನಡ ಕಾವ್ಯದ ಸಂವಹನ ಸಾಧ್ಯತೆಗಳ ದೃಷ್ಟಿಯಿಂದ ಅವುಗಳ ಮಹತ್ವವನ್ನು ಇಲ್ಲಿ ಮನಗಾಣಿಸಲಾಗಿದೆ.

ಕೊನೆಯದಾಗಿ ಅಧ್ಯಾಯ ಐದು ಸಮಾರೋಪವಾಗಿದೆ ಹೊಸಗನ್ನಡ ಕಾವ್ಯದ ಎಲ್ಲ ಪ್ರಮುಖ ಘಟ್ಟಗಳಲ್ಲಿ ಹಾಯ್ದುಬಂದ ಜಿಲ್ಲೆಯ ಚುಟುಕು ಕವಿಗಳು ತಮ್ಮ ಬದುಕಿನ ಮೂಲಭೂತ ಕಾಳಜಿಗಳನ್ನು ಕಾವ್ಯ ಪರಿಧಿಯ ಸ್ಪಂದನೆಗಳನ್ನು ಸಂಕೀರ್ಣತೆಗಳನ್ನು ಆಯಾ ಘಟ್ಟದ ಸನ್ನಿವೇಶಗಳ ಹಿನ್ನಲೆಯಲ್ಲಿ ಅವಲೋಕನೆಗೆ ಈಡು ಮಾಡುತ್ತ ಅದರ ವೈಶಿಷ್ಟ್ಯಗಳನ್ನು ಎತ್ತಿ ಸ್ಪಷ್ಟೀಕರಿಸಲಾಗಿದೆ.

ಮತ್ತೊಮ್ಮೆ ಈ ಸಂದರ್ಭದ ಹಂತದಲ್ಲಿ ಅವುಗಳನ್ನು ಎತ್ತಿ ಕಾಣಿಸುವುದು ನಿರ್ಣಯಿಸುವುದು ಪುನರಾವರ್ತನೆಯೆನಿಸಿದರೂ ಈ ವರೆಗೆ ಕೈಕೊಂಡ ಅಧ್ಯಾಯನದ ಫಲಶ್ರುತಿ ದೃಷ್ಟಿಯಿಂದ ಅನಿವಾರ್ಯವೇನೋ ಒಟ್ಟು ಪ್ರಬಂಧದ ಚೌಕಟ್ಟಿನೊಳಗೆ ಗಮನಿಸಿದ ಚುಟುಕು ಕವಿತೆಗಳ ಕೆಲವು ಮಹತ್ವ ಪೂರ್ಣ ವೈಶಿಷ್ಟ್ಯಗಳನ್ನು ಸೂತ್ರಿಸಿ ಉಲ್ಲೇಖಿಸಲಾಗಿದೆ.

ಪ್ರಬಂಧ ಕೊನೆಯಲ್ಲಿ ಅನುಬಂಧದಲ್ಲಿ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಂಡಿರುವ ಆಕರ ಗ್ರಂಥಗಳ ಸೂಚಿ ನೀಡಲಾಗಿದೆ.

# ಅಧ್ಯಾಯ –2 ಬೀದರ ಜಿಲ್ಲೆಯ ಸಾಹಿತ್ಯಿಕ – ಸಾಂಸ್ಕೃತಿಕ ಪರಂಪರೆ.

2.1 ಪೀಠಿಕೆ

2.2 ಚಾರಿತ್ರ್ಯಿಕ ರಾಜಕೀಯ ಸ್ಥಿತ್ಯಂತರಗಳು

2.3 ಧಾರ್ಮಿಕ ಸಾಮಾಜಿಕ

2.4 ಸಾಹಿತ್ಯಿಕ ಸಾಂಸ್ಕೃತಿಕ

ಅಧ್ಯಾಯ : 2.

# ಬೀದರ ಜಿಲ್ಲೆಯ ಸಾಹಿತ್ಯಿಕ – ಸಂಸ್ಕೃತಿಕ ಪರಂಪರೆ

## 2.1 ಪೀಠಿಕೆ

ಯಾವುದೇ ದೇಶ ಇಲ್ಲದೆ ಪ್ರದೇಶಕ್ಕೆ ತನ್ನದೇ ಆದ ವಿಶಿಷ್ಟ ಚರಿತ್ರ ಹಾಗೂ ಸಾಂಸ್ಕೃತಿಕ ಪರಂಪರೆ ಇದ್ದೇ ಇರುತ್ತದೆ. ಅಂತೆಯೇ ಕರ್ನಾಟಕದ ಮುಕುಟ ಮಣಿ ಎಂಬ ಖ್ಯಾತಿವುಳ್ಳ ಬೀದರ ಜಿಲ್ಲೆಯೂ ತನ್ನದೇ ಆದ ಸಾವಿರಾರು ವರ್ಷಗಳ ಪ್ರಾಚೀನ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಪರಂಪರೆ ಹೊಂದಿ ವಿಶಿಷ್ಟವೆನಿಸಿದೆ ಜಿಲ್ಲೆಯ ವೈಶಿಷ್ಟ್ಯವನ್ನು ಇಲ್ಲಿನ ಪ್ರಾಕೃತಿಕ ಇತಿಹಾಸಿಕ ಸಮಾಜಿಕ ಧಾರ್ಮಿಕ ರಾಜಕೀಯ ಭಾಷಿಕ ಕಲಾತ್ಮಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಸ್ವರೂಪದಲ್ಲಿ ಮನಗಾಣ ಬೇಕು ಬೀದರ ಜಿಲ್ಲೆ ಸ್ಥಿತವಾಗಿರುವುದು ಭಾರತದ ಭೌಗೋಳೀಕ ದಖ್ಖನ್ನಿನ ಮಧ್ಯದಲ್ಲಿ ಐತಿಹಾಸಿಕವಾಗಿ ಮೆರೆದ ನಾಡಿನ ಒಂದು ರೀತಿಯಲ್ಲಿ ಸಾಂಸ್ಕೃತಿಕ ಕೂಡ ಸಂಗಮ್‌ವಾಗಿದೆ:"1 ಇದು ಕಾಲಕ್ಕೆ ಸ್ಥಳಿಯ ಆಳರಸರ ಚಾಲುಕ್ಯ ಕಳಚೂರಿ ಬಹುಮನಿಯರ ಅರಸರ ರಾಜಧಾನಿಯಾಗಿ ಹಲವು ಶತಮಾನಗಳ ಚಾರಿತ್ರಿಕ ವೈಭವವನ್ನು ಮೆರೆದೆ 12ನೆ ಶತಮಾನದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ಜರುಗಿದ ವಚನ ಚಳುವಳಿಯನ್ನು ಸಾಹಿತ್ಯ ಮತ್ತು ಸಾಮಾಜಿಕ – ಧಾರ್ಮಿಕ ಸಂಬಂಧಗಳ ಜನ್ಯಜನಕವೆಂಬಂತೆ ನೋಡಲಾಗುತ್ತದೆ. ಪ್ರಾಚೀನ್ ಕಾಲದಿಂದಲು ಅನೇಕ ಧರ್ಮಗಳು ಭಾಷೆಗಳು ಇಲ್ಲಿಗೆ ಬಂದು ನೆಲೆಸಿವೆ ಕೆಲವು ಇಲ್ಲಿಯೆ ಜನಿಸಿ ನೆಲೆನಿವೆ ಪರಿಣಾಮವಾಗಿ ಇವೆಲ್ಲವೂ ಅಂದಿನಿಂದ ಇಂದಿನವೆಗೂ ಇಲ್ಲಿಯ ಜನಜೀವನ ಸಾಹಿತ್ಯ ಮತ್ತು ಸಾಂಸ್ಕೃತಿಗಳು ಸಮೃದ್ಧಗೊಂಡಿವೆಯಲ್ಲದೆ ತನ್ನದೇ ಆದ ವೈಶಿಷ್ಟೆತೆ ಪಡೆದಿದೆ ಈ ವೈಶಿಷ್ಟ್ಯಗಳಿಗೆ ಕಾರಣವಾದ ಸಂಗತಿಗಳನ್ನು ಸಂಕ್ಷಿಪ್ತವಾಗಿಯಾದರೂ ನೋಡವುದು ಅಧ್ಯಯನದ ದೃಷ್ಟಿಯಿಂದ ಸೂಕ್ತವೆನಿಸುತ್ತದೆ. ಏಕೆಂದರೆ ಯಾವುದೇ ಕಾಲದ ಸಾಹಿತ್ಯ ನಿರ್ಮಿತಿಯ ಹಿಂದೆ ಅದರ ಪರಂಪರೆಯ ಬೇರುಗಳು ಜೀವತಂತುಗಳಾಗಿ ಕಾರ್ಯ ಮಾಡಿರುತ್ತವೆ ಎನ್ನಬೇಕು

## 2.2 ಚಾರಿತ್ರಿಕ – ರಾಜಕೀಯ : ಸ್ಥತ್ಯಂತರಗಳು

ಬೀದರ ಜಿಲ್ಲೆಯ ಇತಿಹಾಸ ಶಿಲಾಯುಗದಷ್ಟು ಪ್ರಚೀನವಾಗಿದೆ ಜಿಲ್ಲೆಯ ಅನೇಕ ಗುಡ್ಡ ಬೆಟ್ಟಗಳಲ್ಲಿ ಇಲ್ಲಿನ ಪ್ರಮುಖ ನದಿಗಳಾದ ಕಾರಂಜಿ ಮತ್ತು ಮಾಂಜ್ರಾ ಇಕ್ಕಲೆಗಳಲ್ಲಿ ಹಳೆಯ ಮತ್ತು ನೂತನ ಶೀಲಾ ಕಾಲದ ಜನ ವಸತಿ ನೆಲೆಗಳನ್ನು ಇತಿಹಾಸಕಾರರು ಸಂಶೋಧಿಸಿದ್ದಾರೆ ಜಿಲ್ಲೆಯು ಪ್ರಮುಖವಾಗಿ ಕೃಷ್ಣಾ ಮತ್ತು ಗೋದಾವರಿ ನದಿ ಕಣಿವೆಗಳಿಗೆ ಒಳಪಟ್ಟು ಅದರ ಪ್ರಾಕೃತಿಕ ವಿಶಿಷ್ಟತೆಗೂ ಕಾರಣವಾಗಿದೆ.

ಇತಿಹಾಸ ಕಾಲದಲ್ಲಿ ಈ ಪ್ರದೇಶವು ಅನೇಕ ರಾಜ ಮನೆತಗಳಿಂದ ಆಳಲ್ಪಟ್ಟಿದೆ ಅದರಲ್ಲೂ

ಪ್ರಮುಖವಾಗಿ ಮೌರ್ಯರು ಶಾತವಾಹನರು ಕದಂಬರು ರಾಷ್ಟ್ರಕೂಟರು, ಬಾದಮಿ ಹಾಗೂ ಕಲ್ಯಾಣ ಚಾಲುಕ್ಯರು ಹೊಯ್ಸಳರು ಯಾದವರು ಕಲಚೂರಿಗಳು ಬಹಮನಿಯರು ಹಾಗೂ ಹೈದ್ರಾಬಾದ ನಿಜಾಂ ಇವರುಗಳು ಆಯಾ ಕಾಲದಲ್ಲಿ ಈ ಪ್ರದೇಶದ ಮೇಲೆ ತಮ್ಮ ಆಡಳಿತಾತ್ಮಕ ಅಧಿ ಪತ್ಯ ಹೊಂದಿದ್ದರು ಇವರುಗಳು. ಆಯಾ ಕಾಲದಲ್ಲಿ ಈ ಪ್ರದೇಶದ ಮೇಲೆ ತಮ್ಮ ಆಡಳಿತಾತ್ಮಕ ಅಧಿ ಪತ್ಯ ಹೊಂದಿದ್ದರು ಇವರುಗಳು ಮಾತ್ರವಲ್ಲದೆ. ಸಿಂಧೂರು ಮತ್ತಿತರರು ಆಯಾ ಕಾಲದ ರಾಜ ಮನೆತಗಳಿಗೆ ಆಧೀನರಾಗಿ ಸುಮಾರು ಒಂದು ಸಾವಿರ ವರ್ಷಗಳಿಂದ ಆಳಿದ್ದ ಇಲ್ಲಿ ದೊರೆತ ಸ್ಮಾರಕಗಳು ಶಿಲಾಶಾಸನಗಳು ದೃಷಿಪಡಿಸುತ್ತವೆ.

ಬಹಳ ಕಾಲ ಬೀದರ ಜಿಲ್ಲೆಯನ್ನು ಸ್ಥಳಿಯರಾದ ಇಂದಿನ ಖೇಣಿ ರಂಜೋಳದ ರಂಜಿಂನ ಸಿಂಧುರು ಆಳಿದರೆಂದು ರಂಜೆಂ ಸಿಂಧುರು ಕುರಿತು ಅಧ್ಯಯನ ಮಾಡಿದ ಪ್ರೊ, ಸೂಗಯ್ಯ ಹಿರೇಮಠ ಹಾಗೂ ಪ್ರೊ .ಬಿ.ಆರ್ ಕೊಂಡಾ ಅವರು ಉಲ್ಲೇಖಿಸಿದ್ಧಾರೆ. ಒಂದು ಉಲ್ಲೇಖ ಹೀಗಿದೆ " ನಾಗವಂಶದ ಸಿಂದ ಮನೆತನದ ನಿಡುದೋಳ ಸಿಂದನ ವಂಶವರು ಬಹುಕಾಲ ರಂಜೇರುವಿನಿಂದ ಮಾಂಡಳಿಕರಾಗಿ ಆಳಿದರು ನಾಲ್ಕನೇ ಶತಮಾನದಿಂದ ಆರಂಭಗೊಂಡ ಸಿಂದರ ಆಳ್ವಿಕೆ ಹದಿಮೂರನೇ ಶತಮಾನದ ವರೆಗೆ ಸಾಗಿ ಬಂದಿತು ಕಲ್ಯಾಣ ಚಾಲುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನ ಆಳ್ವಿಕೆಕಾಲದಲ್ಲಿ ಹಜ್ಜರಸನು ಅಟ್ಟಳ – 300 ಈ ನಾಡಿಗೆ ಮಾಂಡಳಿಕನಾಗಿದ್ದನು 2 ಎನ್ನಲಾಗಿದೆ. ಈ ಪ್ರದೇಶವನ್ನು ಹಿಂದೆ ಅಟ್ಟಳೆ –300 ನಾಡು ಧರಿನಾಡು ಎಂಬುದಾಗಿ ಕರೆಯುಲಾಗುತ್ತಿತ್ತು, ಇಂದಿಗೂ ಜನ ಬಳಕೆಯಲ್ಲಿ ಬೀದರನ್ನು ಧರಿನಾಡು ಎಂದೆ ಕರೆಯುವರು ಆರಂಭದಲ್ಲಿ ನಂದರು ಮೌರ್ಯರು ಈ ಪ್ರದೇಶದ ಮೇಲೆ ಹಿಡಿತ ಹೊಂದಿದ್ದರು ಶಾತವಾಹನರ ಕಾಲದಲ್ಲಿ ಈ ಪ್ರದೇಶ ಹೆಚ್ಚು ಸಮೃದ್ದಿಗೆ ಬಂದಿತಡು ಎಂದೆ ಕರೆಯುವರು ಆರಂಭದಲ್ಲಿ ನಂದರು ಮೌರ್ಯರು ಈ ಪ್ರದೇಶದ ಮೇಲೆ ಹಿಡಿತ ಹೊಂದಿದ್ದರು ಶಾತವಾಹನರ ಕಾಲದಲ್ಲಿ ಈ ಪ್ರದೇಶ ಹೆಚ್ಚು ಸಮೃದ್ದಿಗೆ ಬಂದಿತು ಎಂಬುದಕ್ಕೆ ಇಲ್ಲಿ ದೊರೆತಿರುವ ಪ್ರಾಚೀನ ಭೌದ್ದ ಸ್ಮಾರಕಗಳು ನಿದರ್ಶನವಾಗಿವೆ ಮೌರ್ಯ ಸಾಮ್ರಾಟ ಅಶೋಕನ ಅನೇಕ ಧರ್ಮ ಪ್ರಚಾರಕರು ಜಿಲ್ಲೆಯಲ್ಲಿ ಭೌಧ ಸಾಕಷ್ಟು ಬೌಧ ಧರ್ಮ ಪ್ರಚಾರ ಕೈಕೊಂಡಿದ್ದರೆಂದು ತಿಳಿದು ಬರುತ್ತದೆ ಆದರೆ ನಂತರದ ರಾಜಕೀಯ ಸ್ಥಿತಿಂತಗಳಿಂದ ಅನೇಕ ಬೌದ್ದಸ್ಮಾರಕಗಳು ಹಾಳಾಗಿ ಕಾಲ ಗರ್ಭ ಸೇರಿದ ಎಂದು ಹೇಳಲೇ ಬೇಕು ಒಂದು ಮೂಲದ ಪ್ರಕಾರ ರಂಜೇರಿನ ಸಿಂಧುರು ನಾಗವಂಶಕ್ಕೆ ಸೇರಿದವರೆಂದು ಹೇಳಲಾಗುತ್ತದೆ ಈ ನಾಗವಂಶದವರು ಬೌದ್ಧ ಧರ್ಮ್ ಪರಿಪಾಲಕರೇ ಆಗಿದ್ದರು ರಂಜೇರು ಹಿಲಾಲಪೂರ ಬಲ್ಲುಂಕೆ ಮುಂತಾದ ಕಡೆಗಳಲ್ಲಿ ನಾಗಾರಧನೆಗೆ ಸಂಬಂಧಿಸಿದ ಅನೇಕ ಅವಶೇಷಗಳು ಕಾಣಸಿಗುತ್ತವೆ ಖಣಿರಂಜೋಳದ ಒಂದು ಶಾಸನು ಈ ಪ್ರದೇಶದ ಮೇಲೆ ಅಧಿಪತ್ಯ ಸ್ಥಾಪಿಸಿದ ಮನೆತನದ ವಿವರಗಳ ಕದಂಬರ ಆಳಿಕೆಯ ಮೇಲೆ ಬೆಳಕು ಚೆಲ್ಲುತ್ತದೆ "ಕದಂಬರ ಆಳ್ವಕೆಯ ಆರಂಭ ಕಾಲದಲ್ಲಿ ಕದಂಭರವಂಶ

ಸ್ಥಾಪಕ ಮಯೂರ ವರ್ಮನ ಮಗಳು ಲಕ್ಷ್ಮೀಮತಿ ಹಾಗೂ ನಿಡುದೋಳ ಸಿಂದ ಇವರ ನಾಲ್ಕು ಮಕ್ಕಳಲ್ಲಿ ಒಬ್ಬನಾಗಿದ್ದ ಜಗತ ಸೇಬ್ಯನು ಕಾರಂಜಾನದಿ ತೀರದಲ್ಲಿ ಅಟ್ಟಳೆ ನಾಡಿಗೆ ಅಧಿಪತಿಯಾಗಿ ಆಳಲಾರಂಭಿಸಿದನೆಂದು" ತಿಳಿದು ಬರುವುದು.

ಹೀಗೆ ಶಾತವಾಹನದಿಂದ ಪ್ರಮುಖವಾಗಿ ಆರಂಭಗೊಳ್ಳುವ ಜಿಲ್ಲೆಯ ಇತಿಹಾಸದ ಪ್ರಾಚೀನತೆ ನಂತರದ ಕಲ್ಯಾಣ ಚಾಲುಕ್ಯರು ಕಳಚೂರಿಗಳ ರಾಜಧಾನಿಯಾಗಿ ರಾಜಕೀಯವಾಗಿ ಅತ್ಯಂತ ಪ್ರಮುಖ ಪಾತ್ರ ವಹಿಸಿತೆಂದು ಹೇಳಬಹುದು

10ನೇಯ ಶತಮಾನ ಈ ಜಿಲ್ಲೆಯಲ್ಲಿ ಸಾಂಸ್ಕೃತಿಕ ಪರಂಪರೆಯಲ್ಲಿ ಸುವರ್ಣಯುಗ ಪ್ರಾರಂಭವಾಯಿತೆಂದು ಹೇಳಬಹುದು ಚಕ್ರವರ್ತಿಗಳಾಗಿ ಕರ್ನಾಟಕ ಕವನ್ನಾಳುತ್ತಿದ್ದ ಮಳಖೇಡ (ಮಾನ್ಯಖೇಟ)ದ ರಾಷ್ಟ್ರಕೂಟರನ್ನು ಚಾಲುಕ್ಯರ ತೈಲಪನು ಪತನಗೊಳಿಸಿ ತಮ್ಮ ಪೂರ್ವಜರಿಂದ ಕೈತಪ್ಪಿ ಹೋಗಿದ್ದ ಚಾಲುಕ್ಯ ಸಾಮ್ರಾಜ್ಯವನ್ನು ಕ್ರಿ ಶ 973 ರಲ್ಲಿ ಕಲ್ಯಾಣದಲ್ಲಿ ಪುನರಸ್ಥಾಪಿಸಿದನು ಆದರೆ ಚಾಲುಕ್ಯ ಸಾಮ್ರಾಜ್ಯ ಅಭುದಯವನ್ನು ಕಂಡದ್ದು ಆರನೆಯ ವಿಕ್ರಮಾದಿತ್ಯನ (ಕ್ರಿ ಶ1076) ಕಾಲದಲ್ಲಿ ಎನ್ನಬೇಕು " ವಿಕ್ರಮಾದಿತ್ಯನು ತನ್ನ ಜಾಣ್ಮೆ ಪರಾಕ್ರಗಳಿಂದ ಪ್ರಬಲ ಸಾಮಂತಾಧಿಪತಿಗಳಾಗಿದ್ದ ಕಾಳಚೂರಿಗಳು ಹೊಯ್ಸಳರು ಯಾದವರು ಗಂಗರನ್ನು ತನ್ನ ಅಧಿನಕೊಳಪಡಿಸಿಕೊಂಡಿದ್ದನು" 4 ಅದರಲ್ಲಿ ಕಳಚೂರಿಗಳಂತೂ ಚಾಲುಕ್ಯರ ಸಂಬಂಧಿಗಳಾಗಿ ಬಿಟ್ಟರು ವಿಕ್ರಮದಿತ್ಯನು ಅಖಂಡ ಐವತು ವರ್ಷಗಳ ವರೆಗೆ ಚಕ್ರವರ್ತಿಯಾಗಿ ಇಡೀ ಭಾರತವನ್ನು ಆಳಿದ ಪ್ರಖ್ಯಾತ ದೊರೆಯಿನಿಸಿದನು ಈತನ ಕೀತಿ ದಶದಿಕ್ಕುಗಳಲ್ಲಿ ವ್ಯಾಪ್ತಿಸಿತ್ತು ಕಾಶ್ಮೀರದಿಂದ ಕಲ್ಯಾಣಕ್ಕೆ ಬಂದ ಕಲ್ಹಣನೆಂಬ ಕವಿ ಇಲ್ಲಿ ಆಶ್ರಯ ಪಡೆದು ವಿಕ್ರಮಾಂಕ ದೇವ ಚರಿತೆ ಎಂಬ ಗ್ರಂಥ ರಚಿಸಿದನು ಅಲ್ಲದೆ " ಪಂಡಿತ ವಿಜ್ಞಾನೇಶ್ವರ ಮಿತಾಕ್ಷರ ಗ್ರಂಥ ಬರೆದಿದ್ದು ಈ ದೊರೆಯ ಕಾಲದಲ್ಲಿಯೇ" 5 ಇವೆರಡು ಕೃತಿಗು ಭಾರತೀಯ ಇತಿಹಾಸ ಹಾಗೂ ಶಾಸ್ತ್ರ ಸಾಹಿತ್ಯಕ್ಕೆ ಬೀದರ ಜಿಲ್ಲೆಯ ಕೊಡುಗೆಯನಿಸಿದೆ ವಿಕ್ರಮಾದಿತ್ಯನ ಆಸ್ಥಾನದಲ್ಲಿ ಬಸವ ಪೂರ್ವಯುಗದ ವೀರಶೈವ ಶರಣ ಕೊಂಡುಗುಳು ಕೇಶೀ ರಾಜನು ದಂಡನಾಯಕನಾಗಿದ್ದನು.

ಕಲ್ಯಾಣ ಚಾಲುಕ್ಯಗನ್ನು ಹಿಂದೆ ತಳ್ಳಿಅವರ ಸಂಬಂಧಿ ಸಮಂತರಾಗಿದ್ದ ಕಳಚೂರಿ ಮನೆತನದ ಬಿಜ್ಜಳನು ಅಧಿಕರಕ್ಕೆ ಬಂದು ತನ್ನನ್ನು ಚಕ್ರವರ್ತಿಯೆಂದು ಘೋಷಿಸಿಕೊಂಡನು ಬಿಜ್ಜನ ಕಾಲದಲ್ಲಿ ಆವನ ಮಂತ್ರಿಗಳಾಗಿದ್ದ ಬಸವಣ್ಣನವರು ಕಲ್ಯಾಣದಿಂದ ಭಕ್ತಿ ಚಳುವಳಿಗೆ ವಚನ ಚಳುವಳಿಯಲ್ಲಿ ಸಮಾಜದ ವಿವಿಧ ವರ್ಣ ವೃತಿ ಮೂಲಕ ಕಾಯಕ ಜೀವಿಗಳು ಪಾಲ್ಗಂಡೊ ವಚನ ಸಾಹಿತ್ಯದ ಸಮೃದ್ಧಗೆ ಕಾರಣವಾದರು.

ಕಳಚೂರಿಗಳ ಆಡಳಿರವು ಬಹಳ ಕಾಲ ಮುಂದುವರೆಯುಲಿಲ್ಲ ಬಸವ ಅಲ್ಲಮ ಹಾಗೂ ನೂರಾರು ವಚನಕಾರರ ನೇತೃತ್ವದಲ್ಲಿ ನಡೆದ ಶರಣ ಚಳುವಳಿ ತೀವ್ರಗೊಂಸು ಸನಾತನಿ

ಸಂಪ್ರದಾಯವಾದಿಗಳ ಕಾರಸ್ಥಾನದಿಂದ ಹೋರಾಟ ಹಿಂಸೆಗೆ ತಿರುಗಿ ಅದು ಬಿಜ್ಜನ ಕೊಲೆಯಲ್ಲಿ ಪರ್ಯಾವಸ್ತನಗೊಂಡಿತು ಅಳಿದುಳಿದ ಅಸಂಖ್ಯ ಶರಣರು ಕಲ್ಯಾಣವನ್ನು ಬಿಟ್ಟು ಹೊರ ನಡೆದರು ಚಾಲಕ್ಯರು ಮತ್ತೆ ಅಧಕಾರಿವನ್ನೆರಿದರು ಸಾಮ್ರಾಜ್ಯವನ್ನು ವಿಘಟನೆಯಿಂದ ಬಳಸಿಕೊಳ್ಳಲಾಗಲಿಲ್ಲ, ಸಾಮ್ರಾಜ್ಯದ ಸಾಮಂತರಾಗಿದ್ದ ಜರಂಗಲ್ಲಿನ ಕಾಕತಿಯರು, ದೇವಗಿರಿಯ ಸೇವುಣರು ದೋರ ಸಮುದ್ರದ ಹೊಯ್ಸಳರು ಸ್ವತಂತ್ರವಾದರು ಬೀದರನ ಭಾಗವನ್ನು ಸೇವುಣರು ಮತ್ತು ಕಾಕತೀಯರ ನಡುವೆ ಹರಿದು ಹಂಚಿ ಹೋಯಿತು ಕಾಕತೀಯರ ಕಾಲದಲ್ಲಿ ಬೀದರ ಕೋಟೆ ತಲೆಯತ್ತಿ ಅಲ್ಲಿ ಬಂದು ಬಲಿಷ್ಠ ಕೋಟೆ ನಿರ್ಮಾಣ ಗೊಂಡಿತ್ತು.

ಕ್ರಿ.ಶ 1322 ರಲ್ಲಿ ದಿಲ್ಲಿಯನ್ನಾಳಿತ್ತಿದ್ದ ಮೋಹಮ್ಮದ ಬಿನ್ ತೂಗಲಖನ್ ದಕ್ಷಿಣಕ್ಕೆ ದಂಡೆತ್ತಿ ಬಂದು ಕಾಕತೀಯರಿಂದ ಬೀದರನ್ನು ವಶ ಪಡಿಸಿಕೊಂಡನು ಕ್ರಿ.ಶ 1341ರಲ್ಲಿ ಮುಲ್ತಾನಿನ ಸಿಯೋಖುಧ್ಧೀನನ್ನು ತನ್ನ ಪ್ರತಿನಿಧಿಯಾಗಿ ನೇಮಿಸಿದನು 1337ರಲ್ಲಿ ಗುಲಬರ್ಗಾದಲ್ಲಿ ಅಲ್ಲಾವುದ್ಧಿನ ಗಂಗೂ ಹಸನ್ ಬಹಮನಿಯಯಿಂದ ಬಹಮನಿ ರಾಜ್ಯ ಸ್ಥಾಪನೆಯಾದಾಗ ಬೀದರ ಬಹಮನಿ ರಾಜ್ಯದ ಭಾಗವಾಯಿತು ಮುಂದೆ 1429ರಲ್ಲಿ ಬಹಮನಿಯ ಅಹಮದ್ ಶಹಾನು ತನ್ನ ರಾಜ್ಯಧಾನಿಯನ್ನು ಗುಲಬರ್ಗಾದಿಂದ ಬೀದರ ನಗರಕ್ಕೆ ಸ್ಥಾಳಾಂತರಿಸಿದನು ಅಲ್ಲಿ ಹೊಸದಾಗಿ ಅರಮನೆ ಕೋಟೆ ಸ್ಮಾರಕಗಳು ನಿರ್ಮಾಣವಾದವು 3ನೇ ಮಹಮ್ಮದ ಸಹಾನ ಕಾಲದಲ್ಲಿ ಮಂತ್ರಿ ಮಹಮ್ಮೂದ್ ಗವಾನನು ಅನೇಕ ಕಟ್ಟಡ ಸ್ಮಾರಕ ಆಸ್ಪತ್ರೆ, ಶಿಕ್ಷಣ ಸಂಸ್ಥೆಗಳನ್ನು ನಿರ್ಮಿಸಿ ಬೀದರನ್ನು ದಕ್ಷಿಣದ ಸಾಂಸ್ಕೃತಿಕ ರಾಜ್ಯಧಾನಿಯನ್ನಾಗಿ ಮಾಡಿದನು ಈತನ ಅಭವೃದ್ಧೀಯನ್ನು ಸಹಿಸದ ಕೆಲವರು ಅರಸನ ತಲೆ ಕೆಡಿಸಿ ಗವನನ್ನು ಕೊಲ್ಲಿಸಿದರು ಗವಾನನ ಕೊಲೆಯ ನಂತರ ಬೀದರ ರಾಜಕೀಯ ಅವನತಿ ಪ್ರಾರಂಭವಾಯಿತು ಮುಂದೆ ಮೊಗಲರ ಔರಂಗಜೇಬ ದಾಳಿ ಅಪಾರ ಸಂಪತ್ತಿನ ಲೂಟಿ ರಾಜಕೀಯ ಮೈಷಮ್ಯಾಗಳಿಂದ ಬೀದರನ ವೈಭವ ನಶಿಸಿ ಹೋಯಿತು ಮೊಗಲರ ಅಧಿಪತ್ಯಕೊಳಗಾಯಿತು. 18ನೆ ಶತಮಾನದ ಪೂರ್ವರ್ಧದ ವರೆಗೆ ಬೀದರನ್ನು ಮೊಗಲರ ಪ್ರಾಂತಾಧಿಕಾರಿ ಆಳಿದನು ಈ ಕಾಲದಲ್ಲಿ ಇದು ಪ್ರಾಂತೀಯ ರಾಜಧಾನಿಯಾಗಿತು ಮುಂದೆ ಕ್ರಿ.ಶ 1724ರಲ್ಲಿ ಮೊಗಲರ ದಕ್ಷಿಣ
ಪ್ರಾಂತಗಳ ಅಧಿಕಾರಿಯಾಗಿದ್ದ ಆಸಿಫಜಾಹಿ ಮೊಗಲರ ವಿರುದ್ಧ ಪ್ರತಿಭಟಿಸಿ ಸ್ವತಂತ್ರವಾಗಿ ಹೈದ್ರಾಬಾದ ರಾಜ್ಯ ಸ್ಥಾಪಕನಾಗಿ ನಿಜಾಂ ಮನೆತನದ ಮೂಲ ಪುರುಷನಾದನು ಅಲ್ಲಿಂದ ಏಳು ತಲೆಮಾರಿನ ವರೆಗೆ ಬೀದರ ಹೈದ್ರಾಬಾದ ಸಂಸ್ಥಾನದ ಆಡಳಿತ ಭಾಗವಾಗಿ ಮುಂದುವರಿಯಿತು. ಮೊಗಲರ ಕಾಲದಲ್ಲಿ ಪ್ರಾಂತೀಯ ರಾಜದಾನಿಯಾಗಿದ್ ಬೀದರ ನಂತರದಲ್ಲಿ ಜಿಲ್ಲಾ ಮಟ್ಟಕ್ಕೆ ಇಳಿಯಿತು, ರಾಜಕೀಯ ಏರು ಪೇರುಗಳನ್ನು ಅನುಭವಿಸಿತು.

ಅಗಷ್ಟ 15, 1947 ಭಾರತ ದೇಶಕ್ಕೆ ಸ್ವಾತಂತ್ರ್ಯ ಲಭಿಸಿದರೂ ಬೀದರ ಪ್ರದೇಶಕ್ಕೆ

ಆಸ್ವಾತಂತ್ರ್ಯಲಭಿಸಲಿಲ್ಲ ಭಾರತದ ಒಕ್ಕೂಟದಲ್ಲಿ ಮಿಲಿನವಾಗಲು ನಿರಾಕರಿಸಿದ ನಿಜಾಂನು ಸ್ವತಂತ್ರವಾಗಿ ಉಳಿಯಲು ನಿರ್ಧರಿಸಿದನು ಈ ಹಂತದಲ್ಲಿ ಹೈದ್ರಾಬಾದ ಸಂಸ್ಥಾನದ ವಿಮೋಚನೆಗಾಗಿ ಹಲವಾರು ಹೋರಾಟಗಳೆ ನಡೆದವು ನಿಜಾಮನ ನೆರವಿಗೆ ನಿಂತ ರಜೀಕರ ಪಡೆ ಅನೇಕ ದೌರ್ಜನ್ಯಗಳನ್ನು ಎಸಗಿತು ಪ್ರಜೆ ಪೀಡಕವಾಯಿತು ಅನೇಕ ಸ್ವಾತಂತ್ರ್ಯ ವೀರರಿ ರಜೀಕರರ ದೌರ್ಜನ್ಯದ ವಿರುದ್ದ ಹೋರಾಡಿ ತಮ್ಮ ಆಸ್ತ ಪಾಸ್ತಿ ಪ್ರಾಣಗಳನ್ನು ಕಳೆದು ಕೊಂಡರು ಇದೊಂದು ಚಾರಿತ್ರಿಕ ರಾಜಕೀಯ ಸಂಕಷ್ಟಗಳನ್ನು ಅನು ಭವಿಸಿದ ಕಾಲವಾಗಿತ್ತು ಭಾರತದ ಸರಕಾರದ ಪ್ರಯತ್ನದ ಫಲವಾಗಿ ಕೊನೆಗೆ ಸಪ್ಟಂಬರ 17 1948ರಲ್ಲಿ ನಿಜಾಂ ಭಾರತ ಒಕ್ಕೂಟದಲ್ಲಿ ವಿಲಿನವಾದಾಗ ಬೀದರ ಜಿಲ್ಲೆಗೂ ಸ್ವಾತಂತ್ರ್ಯ ಬಂದಿತು ಸ್ವಾತಂತ್ರ್ಯ ಪೂರ್ವದಲ್ಲಿ 9 ತಾಲ್ಲುಕಗಳನ್ನು ಹೊಂದಿದ್ದ ಬೀದರ ಅನಂತರ 4 ತಾಲೂಕಗಳನ್ನೊಂಲಗೊಂಡ ಜಿಲ್ಲೆಯಾಗಿ ರೂಪ ಪಡೆಯಿತು ಬಳಿಕ ಪುಟ್ಟ ಸುಂದರ ಜಿಲ್ಲೆಯಾಗಿ ತನ್ನದೆ ಚಾರಿತ್ರಿಕ ಸಾಂಸ್ಕೃತಿಕ ಮಹತ್ವ ಪಡೆದಿದೆ.

## 2.3 ಧಾರ್ಮಿಕ – ಸಾಮಾಜಿಕ

ಸಮಾಜ ಸ್ಥಾವರವಲ್ಲ ಅದು ಜಂಗಮ್ಮ ಸ್ವರೂಪಿ ಸಮಾಜಕ್ಕೆ ಈ ಜಂಗಮ್ ಸ್ವರೂಪ ವಿರುವುದರಿಂದಲೆ ಅದು ಕಾಲಕಾಲಕ್ಕೆ ಬದಲಾವಣೆ ಹೊಂದುತ್ತ ಬಂದಿದೆ ಈ ಬದಲಾವಣೆಗೆ ಆಯಾ ಕಾಲದ ರಾಜಕೀಯ ಧಾರ್ಮಿಕ, ಸಾಹಿತ್ಯಕ ಮುಂತಾದ ಸಾಂಸ್ಕೃತಿಕ ಕಾರಣಗಳು ಸೇರಿ ಸಮಾಜವನ್ನು ಚಲನಶೀಲಗೊಳಿಸುತ್ತವೆ. ಈ ಎಲ್ಲ ಅಂಶಗಳಲ್ಲಿ ಧರ್ಮವೂ ಒಂದು ಮಹತ್ವದ ಪಾತ್ರ ವಹಿಸಿರುವುದನ್ನು ಕಾಣವೆವು ಹೀಗಾಗಿ ಧರ್ಮ ಮತ್ತು ಸಮಾಜ ಎರಡು ಒಂದೆ ನಾಣ್ಯದ ಎರಡು ಮುಖಗಳಾಗಿ ಮಾನವ ಜೀವನವನ್ನು ರೂಪಿಸಿ ನಿಯಂತ್ರಿಸುತ್ತವೆ.

"ಧರ್ಮೊ ರಕ್ಷತಿ ರಕ್ಷತ" ಎಂಬ ಸನಾತನ ಮತೊಂದು ಪ್ರಚಲಿತವಿದೆ ಯಾರು ಧರ್ಮವನ್ನು ಗೌರವಿಸುತ್ತಾರೆಯೋ ರಕ್ಷಿಸುತ್ತಾರೆಯೋ ಧರ್ಮ ಅವರನ್ನು ರಕ್ಷಿಸುತ್ತದೆ ಎಂಬುದು ಮಾತಿನ ಅರ್ಥ ಇದಾಗಿದೆ ನಮ್ಮ ಪ್ರಾಚೀನ ಮೊದಲ ಉಪಲಬ್ದ ಕೃತಿಯಾದ ಕವಿರಾಜಮಾರ್ಗದಲ್ಲಿ ಧರ್ಮದ ಬಗೆಗೆ ಹೇಳಲಾಗಿದೆ ಅದೆಂದರೆ " ಕಸವರಂ ವೆಂಬುದು ನರೆಸೈರಿ ಸಾರ್ಲಡೆ ಪರಧರ್ಮಮಂ ಪರ ವಿಚಾರಂ" 6 ಎನ್ನಲಾಗಿದೆ ಇಲ್ಲಿ ಒಂದು ದೇಶದ ಅಥವಾ ಸಮಾಜದ ನಿಜವಾದ ಅರ್ಥವೆಂದರೆ ಮತ್ತೊಬ್ಬರ ಧರ್ಮವನ್ನು ವಿಚಾರನ್ನು ಗೌರವಿಸುವುದಾಗಿದೆವೆಂದು ಹೇಳಲಾಗಿದೆ ಧರ್ಮದ ಉದ್ದೇಶ ಮಾನವನ ಬದುಕಿನ ಸರ್ವಾಗೀಣ ಉನ್ನತಿಯನ್ನು ಬಯಸುವುದಾಗಿದೆ ಬದ್ಧ, ಬಸವ ಮುಂತಾದ ಮಹತ್ಮರು ಸಮಾಜೋಧಾರ್ಮಿಕ ಸಮಾನತೆಗಾಗಿ ಉನ್ನತಿಗಾಗಿ ಶ್ರಮಿಸಿದ್ದನ್ನು ಚರಿತ್ರೆಯಲ್ಲಿ ಕಾಣಬತ್ತೇವೆ ಬಸವಣ್ಣ ನವರಂತೂ ಸಕಲ ಜೀವಾತ್ಮರಿಗೆ ಲೇಸನೇ ಬಯಸುವುದು ನಿಜವಾದ ಧರ್ಮದ ತಿರುಳಾಗಿದ ಎಂಬಂಥ ಮಾಥನ್ನು ಹೇಳಿರುವರು ಧರ್ಮದಲ್ಲಿ ದಯೆ ಹಾಲು ಜೇನಿನಂತೆ ಕೂಡಿಕೊಂಡಿದ್ದರೆ ಅದರ ಸವಿ ಫಲ ಸಮಾಜಕ್ಕೆ ತಟ್ಟಿತ್ತದೆ ಅಂತೆಯೇ "ದಯವೇ ಧರ್ಮದ ಮೂಲ" ವೆಂಬ ಮಾತು ಹುಟ್ಟಿಕೊಂಡಿರಲು ಸಾಕು.

ಒಮ್ಮೊಮ್ಮೆ ಸಮಾಜದ ಮೇಲೆ ಧರ್ಮದ ಹಿಡಿತ ಬಲವಾಗಿ ಅದರ ಕಪಿಮುಷ್ಟಿಯಲ್ಲಿ ಜನತೆ ಸೀಲಕಿ ನರಳು ವಂತಾಗುವಂತಾದಾಗ ಅದರ ವಿರುದ್ದ ಸಮಾಜ ಸುಧಾರಕರು ಪ್ರತಿಭಟಸಿದರು. ಇದಕ್ಕೆ ಹನ್ನೆರಡೆನೆಯ ಶತಮಾನದ ಶಿವಶರಣರೇ ಜ್ವಲಂತ ಉದಾಹರಣೆಯಾಗಿರುವರು " ಹನ್ನೇರಡೆನೆಯ ಶತಮಾನದ ಶರಣರ ಉದ್ದೇಶ ಹೊಸ ಮತ ಧರ್ಮವನ್ನು ಸ್ಥಾಪಿಸುವುದಾಗಿರಲಿಲ್ಲ ಜಿಡ್ಡಗಟ್ಟಿದ್ದ ಅಂದಿನ ಸಮಾಗೋಧಾರ್ಮಿಕ ವ್ಯವಸ್ಥೆಗೆ ಚಿಕಿತ್ಸೆ ನೀಡಿ ಅದಕ್ಕೊಂದು ಹೊಸ ರೂಪ ಕೊಡುವುದಾಗಿತ್ತು ಹೊಸ ಬದುಕಿನ ಆಶಯಗಳನ್ನು ಹಸನುಗೊಳಿಸಿ ಸಮಾನವನ್ನು ಚಲನ ಶೀಲಗೊಳಿಸುವುದಾಗಿತ್ತು 7 ಈ ಉದ್ದೇಶಕ್ಕಾಗಿ ಶರಣರು ಕಾಯಕ ದಾಸೋಹ ದಯೇ ಸಮಾನತೆ ಮುಂತಾದವುಗಳಿಗೆ ಹೊಸ ಅರ್ಥವನ್ನು ನೀಡಿದರು.

ಜಗತ್ತಿನ ಎಲ್ಲ ಜಾತಿ ಧರ್ಮ, ಜನಾಂಗಗಳ ನಡುವೆ ಸೌಹಾರ್ದತೆ, ಪ್ರೀತಿ ಸಮಾನತೆ ನೆಲೆಗೊಂಡು ಅವುಗಳ ನಡುವೆ ಬದುಕುವ ಜನರ ಬಾಳು ಹಸನಾಗಬೇಕೆಂದು ಇಚ್ಛಿಸಿದ ಅನೇಕ ಮಹಾಪುರುಷರು, ದಾರ್ಶನಿಕರು ಶರಣರು, ಸೂಫೀ ಸಂತರು ತತ್ವ ಪದಕಾರರು ಕರ್ನಾಟಕದಲ್ಲಿನ ಅನೇಕ ಕಡೆಗಳಂತೆ ಬೀದರ ಜಿಲ್ಲೆಯಲ್ಲಿಯೂ ಆಗಿ ಹೋಗಿರುವರು ಇವರೆಲ್ಲರ ಮೂಲ ಉದ್ದೇಶ ಸಮಾಜಿಕ ಧಾರ್ಮಿಕ ಮೌಢ್ಯ, ಆಚರಣೆ ಕಂದಾಚಾರಗಳ ಬಂಧನದಿಂದ ಜನತೆಯನ್ನು ಮುಕ್ತಗೊಳಿಸುವುದು ಕಟ್ಟುವುದು ಇಂತಹ ಉದ್ದೇಶಗಳಿಂದಾಗಿಯೆ ಇವರುಗಳು ವಿಶಿಷ್ಟವಾಗಿ ಕಾಣುತ್ತಾರೆ.

ಕ್ರಿ. ಶ ಪೂರ್ವದಲ್ಲಿ ಜನಿಸಿದ ಬೌಧ ಮತ್ತು ಜೈನಧರ್ಮಗಳು ಹಾಗೂ ಮಧ್ಯಯುಗದಲ್ಲಿ ಇಸ್ಲಾಂ, ಶಿಖ, ಕ್ರಿಶ್ಚನ್, ಧರ್ಮಗಳು ಇವುಗಳ ಜೊತೆಗೆ ಇಲ್ಲಿಯೇ ಜನಿಸಿದ ವೀರಶೈವ ಧರ್ಮಗಳಲ್ಲಿವೆ ಶೈವ ಧರ್ಮದ ಪಂಥಗಳಾದ ಕಾಳಾಮುಖ, ಲಾಕುಲೀಶ, ಭೈರವ, ಶಾಕ್ತೇಯ ಹಾಗೂ ಮಹಾರಾಷ್ಟ್ರದ ಅವದೂತರು, ವಾರಕರಿ ಪಂಥಗಳ ಪ್ರಭಾತ ಜಿಲ್ಲೆಯ ಮೇಲೆ ಆಗಿರುತ್ತದೆ ಕ್ರಿಶ ಪೂರ್ವದಿಂದ ಕ್ರಿಶ 3ನೇ ಶತಮಾನದವರೆಗೆ ಜಿಲ್ಲೆಯನ್ನು ಆಳಿದ ಉತ್ತರದ ಮೌರ್ಯರು ಮತ್ತು ಕುಂತಲದ ಶಾತವಾಹನರ ಕಾಲದಲ್ಲಿ ಇಲ್ಲಿ ಭೌದ್ದಧರ್ಮ ಉಚ್ಛಾಯ ಸ್ಥಿತಿಯಲ್ಲಿದ್ದಿತಂದು ಇತಿಹಾಸ ಹೇಳುತ್ತದೆ. ಶಾತವಾಹನರ ಕಾಲದಿಂದಲ ಅವರ ಸಾಮಮತರಾಗಿದ್ದ ಜಿಲ್ಲೆಯ ರಂಜೇಲಿನ ಸಿಂಧುರ ಬೌದ್ಧ ಧರ್ಮಕ್ಕೆ ಆಶ್ರಯ ನೀಡಿದ್ದರೆಂದು ಹೇಳಲಾಗುತ್ತದೆ. ಈ ಕಾಲದಲ್ಲಿ ಜಿಲ್ಲೆಯಾದ್ಯಂತ ಅನೇಕ ಬೌದ್ದ ವಿಹಾರ ಸ್ತೂಪಗಳು ಧರ್ಮಶಾಲಾಗಳು ರಚನೆಯಾಗಿದ್ದವು ಬೀದರ ರಂಜೇರು (ಖೇಣಿಜೋಳ) ಹಳ್ಳಖೇಡ, ಕಲ್ಯಾಣ, ಕಮಠಾಣ ಭಾಲ್ಕಿ, ಓಲಾಲಪೂಖು ಮುಂತಾದೆಡೆಗಳಲ್ಲಿ ಬೌದ್ಧಧರ್ಮಕ್ಕೆ ಸೇರಿದ ಕುರುಹಿಗಳು ದೊರೆಯುತ್ತವೆ. ದಕ್ಷಿಣದಲ್ಲಿ ಕ್ರಿಶ ಪೂರ್ವದಲ್ಲಿ ಪ್ರಸಿದ್ದ ವಾಣಿಜ್ಯ ಶೈಕ್ಷಣಿಕ ಕೇಂದ್ರವಾಗಿದ್ದ ಸನ್ನತಿಯೊಂದಿಗೆ ಈ ಕ್ಷೇತ್ರಗಳು ಸಂಭಂಧವನ್ನು ಹೊಂದಿದವು ಮಹಾರಾಷ್ಟ್ರದ ನಾಸಿಕ, ಔರಂಗಬಾದ ಅಮರಾವತಿ ಪೈಠಣಗಳಿಗೆ ಇಲ್ಲಿಂದ ಹೆದ್ದಾರಿಗಳು ಹಾದು ಹೋಗಿದ್ದವು ಎನ್ನಲಾಗುತ್ತದೆ ಶಾತವಾಹನರ ನಂತರ ಅಧಿಕಾರಕ್ಕೆ ಬಂದ ಬನವಾಸಿಯ ಕದಂಬರು ಕಾಲದಲ್ಲಿ ಕ್ರಮೇಣ ಜೈನಧರ್ಮ ಈ ಪ್ರದೇಶದಲ್ಲಿ ಹರಡಲು ಆರಭಿಸಿತು ರಾಷ್ಟ್ರಕೂಟರ ಕಾಲದಲ್ಲಿ ಜೈನಧರ್ಮವು ಇನ್ನಷ್ಟು ಪ್ರಬಲವಾಯಿತು ಪಂಪ ಪೂರ್ವ ಕಾಲಕ್ಕೆ ಸೇರಿದ ವಡ್ಡಾರಾಧನೆ ಜೈನ ಗದ್ಯ ಕಥಾಗುಚ್ಚು ಈ ಜಿಲ್ಲೆಯಲ್ಲಿಯೆ ರಚನೆಯಾದದೆಂಧು ಹೇಲಾಗುತ್ತದೆ ವಡ್ಡಾರಾಧನೆ ಕರ್ತೃ ಶಿವಕೋಟ್ಯಾ ಚಾರ್ಯನು ಬೀದರ ಜಿಲ್ಲಯ ಹಳ್ಳಿಖೇಡದವನಾಗಿರಬೇಕೆಂದು ಅಂದಾಜಿಸಲಾಗಿದೆ ರಾಷ್ಟ್ರಕೂಟರು ಅನಂತರದ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಅನೇಕ ಜೈನ ಮಂದಿರಗಳು ಬಸದಿಗಳು ಶಿಕ್ಷಣ ಸಂಸ್ಥೆಗಳು ಹುಟ್ಟಿದವು ಜಿಲ್ಲೆಯ ಕಮಠಾಣ ಬಲ್ಲುಂಕೆ ಜಲ ಸಂಗಿ ಹುಮನಾಬಾದ ಕಲ್ಯಾಣ ಮುಂತಾದೆಡೆಗಳಲ್ಲಿ ಇಂಥ ಸ್ಮಾರಕಗಳಿದ್ದುದು ಕಂಡು ಬರುತ್ತದೆ.

ಜೈನ ಮತ್ತು ಬೌದ್ಧ ಧರ್ಮಗಳ ಜೊತೆಗೆ ವೈದಿಕ ಮತ್ತು ಶೈವಧರ್ಮಗಳು ಪ್ರಬಲ ಪೈಪೋಟಿ

ಹೊಂದಿ ತಮ್ಮ ಅಸ್ತಿತ್ವಕ್ಕಾಗಿ ಹೋರಾಡಿದ ಪ್ರಸಂಗಗಳು ಇಲ್ಲಿ ನಡೆದಿವೆ ಶೈವ ಧರ್ಮದ ಲಾಕುಲೀಶ ಶಾಕೇಯ ಭೈರವ ಸಂಪ್ರದಾಯಕ್ಕೆ ಸೇರಿದ ಅನೇಕ ದೇವಾಲಯ ಮಠಗಳು ಇಲ್ಲಿರುವುವು. ಜಿಲ್ಲೆಯ ಮೈಲಾರ ಹುಮನಾಬಾದ, ಚಾಗಲೇರ ವೀರಭದ್ರ ದೇವರು ದೇವಾಲಯಗಳು ಶೈವ ಸಂಪ್ರದಾಯದ ಕುರುಹುಗಳಾಗಿವೆ.

ಕ್ರಿ.ಶ 14ನೇ ಶತಮಾನದಲ್ಲಿ ಇಸ್ಲಾಂಧರ್ಮ ಜಿಲ್ಲೆಯಲ್ಲಿ ಬಹುಮನಿ ಆಳರಸ ಮೂಲಕ ಹೆಜ್ಜೆಯಿಟ್ಟಿತ್ತು " ಬಹುಮನಿ ಮನೆತನದ ಒಂಬತ್ತನೆ ಸುಲ್ತಾನನಾಗಿದ್ದ ಅಹಮದ್ ಶಾಹನು 1429 ರಲ್ಲಿ ಬೀದರಗೆ ವರ್ಗಾಯಿಸಿದ 8 ಬಹಮನಿ ಅರಸರು ಕಿರಮಾನದಿಂದ ಧರ್ಮಗುರುಗಳನ್ನು ಬರಮಾಡಿಕೊಂಡರು. ಅದೆ ವೇಳೇಗೆ ಪರ್ಶಿಯತುರ್ಕಿ ಮೊದಲಾದ ಕಡೆಗಳಿಂದ ಅನೇಕ ಧರ್ಮಗುರುಗಳು ಸೂಫೀಸಂತರು ಬೀದರಿಗೆ ಬರಲಾರಂಭಿಸಿದರು ದಕ್ಷಿಣದಲ್ಲಿ ಇಸ್ಲಾಂಧರ್ಮದ ತತ್ವೋಪದೇಶಗಳನ್ನು, ಭಕ್ತಿಯನ್ನು ಜನರಲ್ಲಿ ಬಿತ್ತಿದರು ಸ್ಥಳೀಯ ಅನೇಕರು ಇಸ್ಲಾಂ ತತ್ವಗಳಿಗೆ ಮಾರು ಹೋಗಿ ಅವುಗಳನ್ನು ತಮ್ಮಲ್ಲಿ ಆಚರಣೆ ತಂದರು. ಧಾರ್ಮಿಕ ಹಾಗೂ ಸಮಾಜಿಕ ಸ್ಥಿತ್ಯಂತರ ದೃಷ್ಟಿಯಿಂದ 12ನೇ ಶತಮಾನ ತುಂಬ ಮಹತ್ವದ್ದಾಗಿದೆ. ಇದನ್ನು ಕರ್ನಾಟಕ ಸಂಸ್ಕೃತಿಯ ಸುವರ್ಣಯುಗ ವೆಂತಲೇ ಕರೆಯಲಾಗುತ್ತದೆ. ಧರ್ಮ, ಭಾಷೆ, ಸಾಹಿತ್ಯ ಹಾಗೂ ಹುಡುಕಲು ಹೋರಾಟ ಕಾಲ ಆ ಹುಡಕಾಟ ನಡೆದದ್ದು ಸಾಮಾಜಿಕವಾಗಿ ವಿಭಿನ್ನಸ್ತರಗಳ ದುಡಿಯುವ ವರ್ಗಗಳಿಂದ ಅಲ್ಲಿ ಕಂಬಾರ ಕುಂಬಾರ, ಚಮ್ಮರ, ಬೆಸ್ತ, ಒಕ್ಕಲಿಗ, ಮಡಿವಾಳ ಹಗ್ಗ ಹೊಸಯುವ, ಡೋಣಿ ನಡೆಸುವ ಸಮಾಜದ ಎಲ್ಲ ವರ್ಗಾದ ಜನರಿದ್ದರು ಇಂಥ ಸಮುದಾಯದಲ್ಲಿ ಸ್ತ್ರೀಯರೂ ಇದ್ದದು ಇನ್ನು ವಿಶೇಷವನಿಸಿದೆ ಅವೆಲ್ಲ ಒಟ್ಟಿಗೆ ತಮ್ಮ ಸಮಾಜಿಕ ಬದುಕಿನ ಆಸ್ತಿತ್ವಕ್ಕಾಗಿ ಹೋರಾಟ ನಡೆಸುವುದರ ಜೋತೆಗೆ ಹೋರಾಟದ ಉಪವಸ್ತುವಾಗಿ ವಚನಗಳನ್ನು ರಚಿಸಿ ಈ ವರೆಗೂ ಪರಂಪರಾಗತವಾಗಿದ್ದ ಕಾವ್ಯವನ್ನು ತಿರಸ್ಕರಿಸಿದರು ಇಡಿಯಾದ ಕನ್ನಡ ಸಾಹಿತ್ಯದಲ್ಲಿಯೆ ವಚನ ಸಾಹಿತ್ಯ ಸಮಾಜಿಕ ಆಶೋತ್ತರಗಳಿಗೆ ಒತ್ತಾಸೆಯಾಗಿ ಮಾಡಿಬಂದದ್ದು ಎನ್ನಬೇಕು ಸಮಾಜದ ವಿಭಿನ್ನ ಸ್ತರಗಳಿಂದ ಬಂದ ಅಸಂಖ್ಯ ಶ್ರಮಿಕ ವರ್ಗದ ಶರಣರ ಹೋರಾಟದ ತಂಡಕ್ಕೆ " ಬಸವಣ್ಣನಂಥ ಒಬ್ಬ ನಾಯಕ ದೊರೆತದ್ದು ಕನ್ನಡದ ಪುಣ್ಯ. ಇಡೀ ತಂಡ ಏಕವ್ಯಕ್ತಿಯಂತೆ ವಚನಗಳ ಸೃಷ್ಟಿಗೆ ತೊಡಗಿತು" 9 ಬಸವಣ್ಣನವರ ಹೆಸರು ಕರ್ನಾಟಕ ಸಂಸ್ಕೃತಿಕ ಇರಿಹಾಸದಲ್ಲಿ ಒಂದು ಸ್ಪೂರ್ತಿಯಾಗಿದೆ ಹನ್ನೆರಡನೆಯ ವ್ಯಾಪಿಸಿಕೊಂಡ ವ್ಯಕ್ತಿತ್ವವಾಗಿದೆ ಆವ್ಯಕ್ತಿತ್ವದ ಮಾತಿನ ಮಾಂತ್ರಿಕತೆ ಮೈಮರೆಸುವಂತದಲ್ಲ. ಅದು ಎಚ್ಚರ ಹುಟ್ಟಿಸುವಂತದ್ದು. ಒಂದು ರೀತಿಯಲ್ಲಿ ಸಮಕಾಲೀನ ಭಾರತದವನ್ನೆ ತನ್ನ ವ್ಯಕ್ತಿತ್ವದಿಂದ ಸೂರೆಮಾಡಿದ ವ್ಯಕ್ತಿ ಬಸವಣ್ಣ ಬಸವಣ್ಣನವರ ನೇತೃತ್ವದಲ್ಲಿ ನಡೆದ ಹೋರಾಟದ ನೆಲ ಬೀದರ ಜಿಲ್ಲೆಯೇ ಆಗಿದೆ 12ನೇ ಶತಮಾನದ ವಚನ ಕಾರರ ಬದುಕು ಮತ್ತು ಅವರ ವಚನ ಸಾಹಿತ್ಯದ ಪ್ರಭಾವವನ್ನು ಇಲ್ಲಿನ ಸಾಹಿತ್ಯದ

ಮೇಲಾಗಿರುವುದನ್ನು ಅಧ್ಯಯನದಲ್ಲಿ ಗುರುತಿಸಬಹುದಾಗಿದೆ.

ಯಾವುದೆ ಒಂದು ದೇಶದ, ಕಾಲದಲ್ಲಿ ಬದುಕಿ ಬಾಳುತ್ತಿರುವ ಜನತೆ ಪ್ರಸ್ತುತ ಜೀವನಕ್ಕೆ ತಮ್ಮ ಆಚಾರ ವಿಚಾರಗಳನ್ನು ಆಸಕ್ತಿಗಳನ್ನು ಸೀಮಿತಗೊಳಿಸಿಕೊಂಡು ತೃಪ್ತಿದಾಯಕ ಬದುಕನ್ನು ಮಾಡಲಾರರು ಯಾಕೆಂದರೆಪ್ರಸ್ತುತ ಜೀವನ ಒಂದಿಲ್ಲಾ ಒಂದು ರೀತಿಯಲ್ಲಿ ತನ್ನ ಹಿಂದಿನ ಪರಂಪರೆಯ ಮೌಲ್ಯಗಳನ್ನು ಸ್ವೀಕರಿಸಿ ರೂಢಿಸಿಕೊಂಡಿರುತ್ತಾರೆ ಇದು ಜಿಲ್ಲೆಯ ಧಾರ್ಮಿಕ ಹಾಗೂ ಸಮಾಜಿಕ ಜೀವನದ ಮಟ್ಟಿಗಿಂತ ನಿಜವಾಗಿದೆ ಹನ್ನೆರಡನೆಯ ಶತಮಾನದ ಶಿವಶರಣರಂತೆಯೇ ಸಮಾಜೋಧಾರ್ಮಿಕ ಉದ್ದಾರಕ್ಕಾಗಿ ಶ್ರಮಿಸಿದ ಇಲ್ಲಿಯೇ ಕೆಲ ಕಾಲದವರೆಗೆ ನೆಲಸಿದ ತಮ್ಮ ಜೀವನ ಸಿದ್ದಾಂತ ಉಪದೇಶಗಳಿಂದ ಜನಸಮಾನ್ಯ ಉದ್ದಾರಕ್ಕಾಗಿ ಶ್ರಮಿಸಿದ ಸೂಫೀ ಸಂತರು, ದಾರ್ಶನಿಕರು ಮಹತ್ಮರ ಜಿಲ್ಲೆಯಲ್ಲಿ ಆಗಿ ಹೋಗಿದ್ದಾರೆ, ಅಂಥವರಲ್ಲಿ ಹದಿನೈದನೆಯ ಶತಮಾನದ ಮಹಮೂದ ಗವನ್ ಶಿಖ್‌ಧರ್ಮದ ಸಂತ ಗುರುನಾನಕ್, ಅವದೂತರು, ದಾರ್ಶನಿಕರು, ಮಹಾರಾಷ್ಟ್ರದ ವಾರಕರಿ ಸಂತಜ್ಞನದೇವ, ಸಂತತುಕಾರಾಮ, ದತ್ತ ಸಮಪ್ರದಾಯ, ಶಕ್ತಿ ಸಂಪ್ರದಾಯದ ಅಂಬಾಭವಾನಿ, ದುರ್ಗಾ ಪರಮೇಶ್ವರಿ ಮುಂತಾದವರ ಪ್ರಭಾವಗಳು ಕಾಣುತ್ತವೇ ಬೀದರ ಜಿಲ್ಲೆ ಹಲವಾರು ಮತಧರ್ಮಗಳನ್ನು ಒಡಲೊಳಗಿಟ್ಟುಕೊಂಡು ಧಾರ್ಮಿಕ ಸಮನ್ವಯತೆ ಮರೆದಿದೆ 10ಹನ್ನೆರಡನೆಯ ಶತಮಾನರ ಶಿವಶರಣ ಕನಸುಗಳು ಧ್ಯರ್ಯಗಳನ್ನು ಹೊತ್ತುಕೊಂಡು ಅವುಗಳನ್ನು ತಮ್ಮ ಬದುಕಿನಲ್ಲಿ ಕಾರ್ಯ ರೂಪಕ್ಕಿಳಿಸಿದ ಮಹಾಪುರುಷರಲ್ಲಿ ಭಾಲ್ಕಿಯ ಪಟ್ಟ ದೇವರುನ್ನು ಎಂದಿಗು ಮರೆಯುವಂತಿಲ್ಲ ಪಟ್ಟ ದೇವರು ಜೀವನವೇ ಒಂದು ಪವಾಡ ಸದೃಶ್ಯವಾದುದು ಅವರು "ಭಾಲ್ಕಿಯ ಹೀರೇಮಠದ ಪಟ್ಟಾಧ್ಯಕ್ಷರಾಗಿದ್ದರೂ ಎಂದು ಅದನ್ನು ಒಂದು ಅಧಿಕಾರದ ಸ್ಥಾನವೆಂದು ಭಾವಿಸಿದವರೇ ಅಲ್ಲ ಅವರ ಸರಳ ಸಜ್ಜನಿಕೆಗಳು, ವಿದ್ಯಾರ್ಥಿ ಪ್ರೇಮ ಅತಿಥಿಸತ್ಕಾರ ಯಾವುನ್ನು ದಂಗು ಬಡಿಸುವಂತಿದ್ದವು"11 ಅವರು ಶಿಕ್ಷಣ ಮತ್ತು ಕಾಯಕ ಸಮಾಜೋಧಾರ್ಮಿಕ ಸೇವೆಗಳನ್ನು ಶಿವನ ಸಂಕಲ್ಪವೆಂದೆ ಬಗೆದಿದ್ದರು ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುವುದಕ್ಕಾಗಿ ಹಾಗೇಯೇ ಕನ್ನಡವನ್ನು ಈ ಪ್ರದೇಶದಲ್ಲಿ ಕಟ್ಟಿ ಬೆಳೆಸುವುದಕ್ಕಾಗಿ ತುಂಬಾ ಶ್ರಮವನ್ನು ವಹಿಸಿದರು ನಿಜಾಮ ಸರಕಾರದಲ್ಲಿ ಕನ್ನಡ ಕಲಿಕೆಗೆ ಅಷ್ಟೊಂದು ಪ್ರೋತ್ಸಾಹಕರ ವಾತಾವರಣ ಇರದಿದ್ದಾಗ ಕನ್ನಡ ಶಿಕ್ಷಣ ಬೋಧಿಸುವುದಕ್ಕೆ ಪಟ್ಟದೇವರು ಬದ್ದರಾಗಿ ಕಾರ್ಯ ಕೈಕೊಂಡರು ಅವರು ಶಾಲೆಯ ಹೊರೆಗೆ ಉರ್ದು ಮಾಧ್ಯಮ ಬೋರ್ಡನ್ನು ಹಾಕಿ ಅಲ್ಲಿನ ವಿದ್ಯಾರ್ಥಿಗಳಿಗೆ ಕನ್ನಡವನ್ನು ಕಲ್ಪಸಿದ ವ್ಯವಸ್ಥೆ ಕಲ್ಪಸಿದ್ದು ದೊಡ್ಡ ಕ್ರಾಂತಿ ಕಾರವೇ ಹೌದು ಅಷ್ಟೆ ಅಲ್ಲದೆ ಅವರು ಕರ್ನಾಟಕ ಏಕೀಕರಣಕ್ಕಾಗಿ ನಡೆಸಿದ ಹೋರಾಟವು ಯಾರೂ ಮರೆಯುವಂತಿಲ್ಲ ಪೂಜ್ಯ ಪಟ್ಟದೇವರಂತೆ ಈ ಜಿಲ್ಲೆಯಲ್ಲಿ ಸಮಾಜೋಧಾರ್ಮಿಕ ಜಾಗೃತಿಗಾಗಿ ಶ್ರಮಿಸುತ್ತಿರುವ ಮತ್ತೊರ್ವ ಮಹಾಪುರುಷರೆಂದರೆ ಬೇಲ್ದಾಳ ಶರಣರಾಗಿದ್ದಾರೆ.

ಇಪ್ಪತ್ತನೆಯ ಶತಮಾನದ ಈ ಪುಣ್ಯ ಪುರುಷರ ಆದರ್ಶ ಜೀವನ, ಉನ್ನತ ತತ್ವ ವಿಚಾರಗಳು ಕಾಯಕ ದಾಸೋಜಗಳು ಸಮಾಜ ಸುಧಾರಣೆಯ ಮೂಲ ಮಂತ್ರಗಳಾದವು ಅಲ್ಲದೆ ಇಂದಿನ ವಿಜ್ಞಾನ ಯುಗದಲ್ಲಿಯೂ ಜನಸಮಾನ್ಯರಲ್ಲಿ ಬೇರೂರದ ಧಾರ್ಮಿಕ ಮೂಢ ನಂಬಿಕೆ ಅಂಧಶ್ರದ್ದ, ಕಂದಾಚಾರಗಳು ಗೊಡ್ಡು ಸಂಪ್ರದಾಯಗಳ ಮುಲೋತ್ಪಾಟನೆಗೆ ಅಪಾರವಾಗಿ ಶ್ರಮಿಸಿದ್ದಾರೆ ಜಿಲ್ಲೆಯ ಭಕ್ತರ ಮನದಲ್ಲಿ ನಡೆದಾಡುವ ದೇವರೆಂದೆ ಹೆಸರಾಗಿರುವರು.

ತನ್ನದೆನ್ನುವ ಸ್ವಾರ್ಥವಿಲ್ಲದ, ತಾನೆನ್ನುವ ಅಹಂಕಾರವಿಲ್ಲದ ಚರಸೇವೆಯನ್ನು ಬದುಕಿನ ಉಸಿರಾಗಿಸಿಕೊಂಡಿದ್ದ ಇಂಥ ಶರಣರ ಜೀವನ ಮತ್ತು ಅವರ ಕಾರ್ಯ ಜಿಲ್ಲೆಯ ಧಾರ್ಮಿಕ ಹಾಗೂ ಸಾಮಾಜಿಕ ಉತ್ತಮ ಬೆಳವಣಿಗೆಗೆ ಕೊಡುಗೆಯಾಗಿದೆ ಎಂದು ಬೇರೆ ಹೇಳಬೇಕಾಗಿಲ್ಲ.

## 2.4 ಸಾಹಿತ್ಯ ಸಂಸ್ಕೃತಿ

ಬೀದರ ಜಿಲ್ಲೆ ಸಾಂಸ್ಕೃತಿಕವಾಗಿ ಅತ್ಯಂತ ಶ್ರೀಮತಿಕೆಯನ್ನು ಹೊಂದಿದೆ ಇಲ್ಲಿನ ಸಾಂಸ್ಕೃತಿಕ ಪರಂಪರೆಗೆ ಸಾವಿರರು ವರ್ಷಗಳ ಪ್ರಾಚೀನತೆಯಿದ್ದು ಇಲ್ಲಿನ ಕಲೆ, ಭಾಷೆ, ಧಾರ್ಮಿಕ ಸಮಾಜಿಕ ರಾಜಕೀಯ, ಸಾಹಿತ್ಯ ಮುಂತಾದವುಗಳಿಂದ ಚರಿತ್ರೆಯಲ್ಲಿ ತನ್ನದೆ ಆದ ವಿಶಿಷ್ಟ ಸ್ಥಾನ ಪಡೆದಿದೆ " ಇತಿಹಾಸ ಕಾಲದಿಂದ ಈ ಮಣ್ಣಿನಲ್ಲಿ ವೈಶಿಷ್ಟಮಯ ಸಾಂಸ್ಕೃಕ ಬದುಕು ರೂಪ ಗೊಂಡು ಬೆಳೆದು ಬಂದಿರುವುದು ಸುಸ್ಪಷ್ಟ"

ಸಂಸ್ಕೃತಿಕ ಮನುಷ್ಯನಿಗೆ ಸಂಬಂಧಿಸಿದ್ದು ಅವನನ್ನು ಅನಾಗರಿಕತೆಯಿಂದ ನಾಗರಿಕೆಗೆ ಒಯ್ಯುವುದು ಹೀಗಾಗಿ ಸಂಸ್ಕೃತಿಯ ಮಾನವನ ಜೀವನ ವಿಧಾನವಾಗಿದೆ ಎನ್ನಬಹುದು ಅದು ಮನುಷ್ಯ ಎಲ್ಲ ನೆಲೆಗಳ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವುದರೊಂದಿಗೆ ಜೀವನವನ್ನು ಅತ್ಯಂತ ಮಾನವೀಯ ಕೇಂದ್ರ ನೆಲೆಯಿಂದ ನಿರ್ದೇಶಿಸುತ್ತದೆ" 12 ಈ ನೆಲೆಯಲ್ಲಿ ಬೀದರ ಜಿಲ್ಲೆಯ ಕಲೆ, ಭಾಷೆ, ಸಾಹಿತ್ಯ ಮುಂತಾದವುಗಲನ್ನು ಕಾಣಬಹುದು ಇಲ್ಲಿನ ಸಾಂಸ್ಕೃತಿಕ ಪರಂಪರೆಗೆ ಆಯಾಕಾಲದ ಬರಹಗಾಗರು, ಜನರೂ ತಮ್ಮದೇ ಕೊಡುಗೆ ನೀಡುವುದರ ಮುಖಾಂತರವಾಗಿ ಅದರ ಮಹತ್ವವನ್ನು ಎತ್ತರಿಸಿದ್ದಾರೆ.

ಸಾವಿರಾರು ವರ್ಷಗಳ ಭವ್ಯ ಚರಿತ್ರೆಯನ್ನು ಹೇಳುವ ದೇವಾಲಯ ಶಿಲ್ಪಕಲೆ, ಶಾಸನಗಳು, ಕೋಟೆ, ಕೋತ್ತಲಗಳು ಜಿಲ್ಲೆಯಾದ್ಯಾಂತ ಕಂಡು ಬರುತ್ತದೆ. ಕ್ರಿ.ಶ 4ನೆ ಶತಮನದಿಂದ 13ನೇ ಶತಮಾನದ ವರೆಗೆ ಸಮಂತರಾಗಿ ಆಳಿದ ಜಿಲ್ಲೆಯ ಖೇಣಿ ರಂಜೋಳದ ಸಿಂಧರ ಅನೇಕ ಶಾಸನಗಳು, ಶಿಲ್ಪಗಳು ರಂಜೋಳ ಮೈನಳ್ಳಿ, ಮರಗುಂದಿ ಸಿಂಧೊಲ ಜಿಲ್ಲೆಯ ಜಲಸಂದಿ ಅತ್ಯದ್ಭತ ಶಿಲ್ಪ ಕಲೆಗ ಪ್ರಸಿದ್ಧಿಯಾಗಿದೆ. ಮೈವಿಧ್ಯಮಯ ಸಾಂಸ್ಕೃತಿಕ ಜನವಸತಿವಿರುವ ಈ ಜಿಲ್ಲೆಯಲ್ಲಿ ಸಮರಸ್ಯಾಕ್ಕೆ ಹೆಸರಾಗಿದ.

13ನೇ ಶತಮಾನದ ಬಹುಮನಿ ಶಾಹಿ ಅರಸರ ಕಾಲದಲ್ಲಿ ಬಿದ್ರಕಲೆ ಹುಟ್ಟಿ ಜಗತ್ಪ್ರಸಿದ್ಧವಾಗಿದೆ 1424 ರಿಂದ 1426 ರ ಸುಮಾರಿಗೆ ಬಹುಮನಿ ಸುಲ್ತಾನನಾದ ಅಹ್ಮದ –ಷಾ– ಅಲ್ ವಲಿಯ ತನ್ನ ರಾಜಧಾನಿಯನ್ನು ಗುಲಬರ್ಗಾದಿಂದ ಬೀದರೆ ವರ್ಗವಣೆ ಮಾಡಿದ ಸಂದರ್ಭದಲ್ಲಿ ಬಿದರಿಕಲೆ ಉಗಮವಾಯಿತು[13] ಎನ್ನಲಾಗುತ್ತದೆ ಬಹುಮನಿಗಳ ಕಾಲದಲ್ಲಿ ಇರಾನ್ ತುರ್ಕಿ ದೇಶಗಳಿಂದ ಇಲ್ಲಿಗೆ ಬಂದ ಕಲಾಕಾರರು ಬಿದರ ಕಲೆಯನ್ನು ರೂಪಿಸಿದರು ಈ ಕಲೆಗೆ ಬಹುಬೇಗನೆ ರಾಜಾಶ್ರಯ ಲಭಿಸಿ ಪ್ರಸಿದ್ದಿಗೆ ಬಂದಿತು ಪ್ರಾಚೀನ ಕಾಲದಲ್ಲಿ ಅನೇಕ ವಿಧೇಶಿ ಪ್ರವಾಸಿಗರು ಈ ಕಲಾಕೃತಿ ಗಳಿಗೆ ಆಕರ್ಷಿತರಾಗಿದ್ದರು. ಶತ ಶತಮಾನದಗಳಿಂದ " ಬಿದ್ರಕಲೆ ಕರ್ನಾಟಕ ಭಾರತವಷ್ಟೇ ಅಲ್ಲ ಇಡೀ ವಿಶ್ವದ ಕಲೆಗಳಲ್ಲಿಯೇ ಹೊಸತನವುಳ್ಳದಾಗಿದೆ"[14] ಉದ್ದೇಶಿ ಕಲಾವಿದರಿಂದ ರೂಪ ಪಡೆದ ಈ ಕಲೆಯ ಜನ್ಮ ಸ್ಥಳ ಬೀದರ ಆಗಿದೆ ಬಿದರ ಕಲೆಕೃತಿ ರಚನೆಗೆ ಬೇಕಾಗುವ ಮಣ್ಣು ಬೀದರ ಹೊರತು ಬೇರೆಲ್ಲಾ ದೊರೆಯದಿರುವುದು ಸೀಸ ಸತು ತವರು, ತಾಮ್ರ, ಈ ಎಲ್ಲ ಲೋಗಳನ್ನು ಹದ ಬರುವ ವರೆರೂ

ಕಾಯಿಸಿ ಸಿದ್ದಪಡಿಸಿ ಅದರ ಮೇಲ್ಮೈ ವಿನ್ಯಾಸದಲ್ಲಿ ಒತ್ತಾಳೆ, ತಾಮ್ರ, ಬೆಳ್ಳಿ, ಅಥವಾ ಬಂಗಾರದ ಎಳೆಗಳಿಂದ ಎರಕ ಹೊಯ್ಯುತ್ತಾರೆ ಹೀಗೆ ಅನೇಕ ಲೋಹಗಳಿಂದ ಸಿದ್ದಪಡಿಸಿಟ್ಟ ಬಿದರಿ ಕಲೆ ನೋಡಲು ಅತ್ಯಂತ ಆಕರ್ಷವಾಗಿದು, ಮನೆ, ಕಚೇರಿಗಳಲ್ಲಿ ಅಲಂಕಾರ ವಸ್ತುವಾಗಿ ಬಳಸುವರು ಬಿದರಿ ಕರಕುಶಲ ವಸ್ತುಗಳು ವಿಶ್ವಮಾರುಕಟ್ಟೆಯನ್ನು ಪ್ರವೇಶಿನ ಬೀದರನ ಹೆಸರನ್ನು ಜಗದ್ವಿಖ್ಯಾತಗೊಳಿಸಿದೆ.

ಜಿಲ್ಲೆಯ ಸಾಹಿತ್ಯಕ್ಕೆ ಸಾವಿರಾರು ವರ್ಷಗಳ ಪ್ರಾಚೀನ್ ಚರಿತ್ರೆಯಿದೆ. ಮುಖ್ಯವಾಗಿ ಇಲ್ಲಿನ ಸಾಹಿತ್ಯವನ್ನು ಜನಪದ ಹಾಗೂ ಶಿಷ್ಟ ಸಾಹಿತ್ಯಗಳೆಂದು ವರ್ಗಿಕರಿಸಲಾಗುತ್ತದೆ. ಇತರೆಡೆಗಳಂತ ಜಿಲ್ಲೆಯ ಜನಪದ ಸಾಹಿತ್ಯದಲ್ಲೂ ಗೀತೆ, ಕಥನಗೀತೆ, ಕಥೆ, ಗಾದೆ, ಒಗಟ್ಟು, ಒಡಪುಗಳಾಗಿ ವರ್ಗಿಕರಿಸಲಾಗಿದೆ. ಇವುಗಳಲ್ಲದೆ ಬೀದರ ಜಿಲ್ಲೆಯಲ್ಲಿಯೇ ವಿಶಿಷ್ಟವಾಗಿ ಬಳಕೆಯಲ್ಲಿರುವ ಬುಲಾಯಿ ಹಾಡು, ಸೀಗಿ ಹಾಡು, ಪೀಡೆಯ ಹಾಡುಗಳು ಜಿಲ್ಲೆಯ ಜನಪದ ಸಾಹಿತ್ಯದ ಮಹತ್ವವನ್ನು ಹೆಚ್ಚಿಸಿದೆ. ಬೀದರ ಜಿಲ್ಲೆಯ ಆಂಧ್ರ ಪ್ರದೇಶ ಮತ್ತು ಮಹಾರಾಷ್ಟ್ರ ರಾಜ್ಯಗಳ ಗಡಿಯಡಿಗೆ ಹೊಂದಿಕೊಂಡಿರುವುದರಿಂದ ಮತ್ತು ಶತಮಾನಗಳಿಂದ ಆಡಳಿತ ಭಾಷೆಯಾಗಿದ್ದ ಉರ್ದು ಪರ್ಶಿಯನ್ ಮತ್ತು ಮರಾಠಿ, ಭಾಷೆಗಳ ಪ್ರಭಾವವನ್ನು ಶಿಷ್ಟ ಮತ್ತು ಜನಪದ ಸಾಹಿತ್ಯಗಳೆರೆಡು ಮೇಲಾಗಿರುವುದ್ನ್ನು ಕಾಣುತ್ತೇವೆ.

ಬೀದರ ಜಿಲ್ಲೆಯ ಜನಪದ ಸಾಹಿತ್ಯ ಪ್ರಕಾರಗಳ ಕುರಿತಾಂತೆ ಸಹ್ರಸ ಸಂಪಾದನೆ, ಸಂಶೋಧನೆ ನಡೆದಿದೆ ಅವುಗಳಲ್ಲಿ ಜನಪದ ಗೀತೆಗಳನ್ನು ಕ್ಯಾತನಳ್ಳ ರಾಮಣ್ಣ ಜನಪದ ಕಥೆಗಳನ್ನು ಡಾ.ಬಿ.ಬಿ. ಹೆಂಡಿ, ಡಾ॥ ಎಂ.ಎಸ್. ಲಠೆ, ಡಾ॥ ಮ.ಗು ಬಿರಾದರ ಡಾ॥ ಬಸವರಾಜ ಪೋಲೀಸ ಪಾಟೀಲ ಬುಲಾಯಿ ಹಾಡುಗಳು ಡಾ॥ ಜಗನ್ನಾಥ ಹೆಬ್ಬಾಳ ಡಾ॥ ಡಿ.ವಿ ನಾಯ ಶ್ರೀ ವಿರುಪಾಕ್ಷ ಸ್ವಾಮಿ ಗೋರಟಾ ಸೀಗಿ ಹಾಡುಗಳು ಡಾ॥ ರಾಜೆಂದ್ರ ಯರನಾಳೆ ಸಂಪ್ರದಾಯದ ಹಾಡುಗಳು ಶ್ರೀಮತಿ ಜಯದೇವಿ ತೇಲಿ ತತ್ವ ಪದಕಾರರು ಡಾ। ಬಸವರಾಜ ಸಬರ ಎಚ್, ಕಾಶಿನಾಥ ರೆಡ್ಡಿ ಡಾ॥ ಜೆ.ಬಿ ವಿನಾಜಿ ಜನಪದ ಗೀತೆಗಳು ಡಾ॥ ಸೋಮನಾಥ ಯಳವಾರ ಡಾ॥ ಪ್ರೇಮಾ ಸಿಸೆಳ, ದೇಶಂಶ ಹುಡಗಿ ಮ.ಮಾ ಬೋರಾಳಕರ್ ಡಾ॥ ಸೋಮನಾಥ ನಚ್ಚಾ ಜಿಲ್ಲೆಯ ಜಾತ್ರಾ ಹಬ್ಬಗಳ ಕುರಿತು ಡಾ॥ ಜಗನ್ನಾಥ ಹೆಬ್ಬಾಳ ಅಲ್ಲದೆ ಜಿಲ್ಲೆಯ ಜನಪದ, ಕಥೆ ಗಾಡಿ ಬಹಟು ಸಂಪ್ರದಾಯಗಳು ಗ್ರಾಮದೇವತೆಗಳು ಹುತಿಹಾಡು, ಮದುವೆ ಸಂಪ್ರದಾಯದ ಹಾಡುಗಳ ಬಗೆಗೆ ಸಮಾಜ ಸಾಂಸ್ಕೃತಿಕ ಸಂಶೋಧನಾಧ್ಯಾಯನಗಳು ನಡೆದಿದೆ, ಹೇಗೆ ಸಗ್ರ ಸಂಪಾದನೆ ಸಂಶೋಧನೆ ಮೂಲಕ ಅನೇಕ ಗ್ರಂಥಗಳನ್ನು ಪ್ರಕಟಿ ಜಿಲ್ಲೆಯ ಜನಪದ ಸಾಹಿತ್ಯ ಸಮೃಟ್ಟಯನ್ನು ಬೆಳಕಿಗೆ ತಂದಿದ್ದಾರೆ.

ಬೀದರ ಜಿಲ್ಲೆಯಲ್ಲಿ ಅನೇಕ ಲಾವಣಿ ಕವಿಗಳು ಸಣ್ಣಾ ಕರ್ತೃಗಳು ಕಾಣಸಿಗುತ್ತರೆ ಪುರಾಣ . ಇತಿಹಾಸ ಹಾಗೂ ಸಮಾಜಿಕ ವಸ್ತು ವಿಷಯಗಳನ್ನು ಸಣ್ಣಬಗೆಗಳು ಇಲ್ಲಿ ದೊರೆಯುತ್ತವೆಊರನಲ್ಲಿ ಸಣ್ಣಟಗಳು ಕಲಾವಿದರು ಇನ್ನು ಜೀವಂತವಾಗಿದ್ದಾರೆ ಆದರೆ ಸಣ್ಣಟಗಳ ಸಗ್ರಹ ಕಾರ್ಯ ಇನ್ನು ನಡೆಯ

ಬೇಕಿದೆ " ಹೈದ್ರಾಬಾದ ಕರ್ನಾಟಕ ಸಣ್ಣಾಟಗಳು ಎಂಬ ಕಿರು ಹೊತ್ತಿಗೆಯನ್ನು ಡಾ॥ ಬಸವರಾಜ ಪೋಲೀಸ ಪಾಟೀಲರು ಸಂಪಾದಿಸಿದ್ದಾರೆಅದರಲ್ಲಿ ಬೀದರ ಜಿಲ್ಲೆಯ ಸಣ್ಣಾಟಗಳ ಕರ್ತೃ ಹಾಗೂ ಕಲಾವಿದರನ್ನು ಪರಿಚಯಿಸಿರುವರು ಅದರಲ್ಲಿ "ಬನ್ ಚಿಂಚೋಳಿ, ಭಾಲ್ಕಿ, ಹುಡುಗಿ ಚಾಗಲೇರಿ, ಖೇಳಗಿ, ಚಳಕಾಪೂರ, ದೊಡ್ಡಗೊರಟಾ ಮುಡಬಿ ಬೆಳಕೇರಿ ಖೇಡ, ಧುಮ್ಮಣಸೂರ, ಅಂಬಲಗಿ"13 ಮುಂತಾರ ಕಡೆಗಳಲ್ಲಿನ ಜನಪದ ಕಲಾವಿದರು ಸಣಾಟಗಳನ್ನು ರಚಿಸಿ ಪ್ರಯೋಗುತ್ತಿದ್ದರು ಬಗೆಗೆ ತಳಿಸುವರು ಹೀಗಾಗಿ ಬೀದರ ಜಿಲ್ಲೆ ಜನಪದ ಅನೇಕ ಸಾಹಿತ್ಯ ಪ್ರಕಾರಗಳ ಕಣಜವಾಗಿದೆ ಎನ್ನಬಹುದು.

ಶಿಷ್ಟ ಸಾಹಿತ್ಯ ರಚನೆಯಿಂದಲೂ ಬೀದರ ಜಿಲ್ಲೆ ಗಮನ ಸಳೆಯುವಂತಹದ್ದಾಗಿದೆ ಸಾವಿರಾರು ವರ್ಷಗಳ ಸಾಹಿತ್ಯ ಪರಂಪರೆ ಹೊಂದಿರುವ ಜಿಲ್ಲೆಯಲ್ಲಿ ಕವಿಗಳು, ವಚನಕಾರರು, ತತ್ವ ಪದಕಾರರು ಕಥೆಗಾರರು, ಕಾದಂಬರಿಕಾರರು, ವೈಚಾರಿಕ ಬಹರಗಾರರು ಆಯಾಕಾಲ ಘಟ್ಟಗಳಲ್ಲಿ ವಿಶಿಷ್ಟ ಕೃತಿ ರಚನೆಗಳಿಂದ ಜಿಲ್ಲೆಯ ಸಾಹಿತ್ಯವನ್ನು ಸಮೃದ್ದ ಗೊಳಿಸಿದ್ದಾರೆ.

ಜಿಲ್ಲೆಯ ಶಿಷ್ಟ ಸಾಹಿತ್ಯದ ಇತಿಹಾವು ಕಿ.ಶ. 9ನೆ ಶತಮಾನದಿಂದ ಪ್ರಾರಂಭವಾಗುತ್ತದೆ ಪಂಪ ಪೂರ್ವಯುಗದ ಪ್ರಥಮ ವಿಶಿಷ್ಟ ಗದ್ಯ ಕೃತಿ ವಡ್ಡಾರಾಧನೆ ರಚನೆಯಾದುದು ಜಿಲ್ಲೆಯ ಹಳ್ಳಿಖೇಡ ಪ್ರದೇಶದಲ್ಲಿ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ ವಡ್ಡಾರಾಧನೆ ಜೈನ ಧರ್ಮದ ತತ್ತೋಪದೇಶಗಳನ್ನು ಉಪಸರ್ಗ ಕೇವಲಿ ವೃತವನ್ನು ಹೇಳವ ಮಹತ್ವ ಕೃತಿಯಾಗಿದೆ ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲಿಕ್ಯರು ಜೈನಧರ್ಮಕ್ಕೆ ನೀಡಿದ ಪ್ರೋತ್ಸಾಹದಿಂದಾಗಿ ಪ್ರದೇಶದಲ್ಲಿ ಅದು ವ್ಯಾಪಕವಾಗಿ ಬೆಳೆಯಿತು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕಲ್ಹಣನಿಂದ ವಿಕ್ರಮಾಂಕದೇವ ಚರಿತೆ, ವಿಜ್ಞಾನೇಶ್ವರ ನಿಂದ ಮಿತಾಕ್ಷರ ಎಂಬ ಸಂಸ್ಕೃತ ಗ್ರಂಥಗಳು ರಚನಮೆಯದವು "ಮಿತಾಕ್ಷರದ ಕರ್ತೃ ಜಿಲ್ಲಯ ಮಾಸಿಮಡೆಯವನೆಂದು ಹೇಳಲಾಗುತ್ತದೆ ಅನೇಕ ಶತಮಾನಗಳ ವರೆಗೆ ಮಸ್ಲಿಂ ಅರಸರ ಆಳ್ವಿಕೆಗೆ ಒಳಗಾಗಿದ್ದ ಈ ಪ್ರದೇಶ ಉರ್ದು ಭಾಷೆ ಸಾಹಿತ್ಯಕ್ಕೆ ಅಮೋಘ ಕಾಣಿಕೆ ನೀಡಿದೆ ಬಹಮನಿ ಸುಲ್ತಾನ ಅಹ್ಮದ್‌ಷಾನ ಆಸ್ಥಾನ ಕವಿ ಆಧರಿ ಬಹಮ ನಾಮ" ಎಂಬ ಗ್ರಂಥವನ್ನು ರಚಿಸಿದನು" ಬಹಮನಿ ಅರಸರ ಕಾಲದಲ್ಲಿ ಸೂಫಿಸಂತರಿಂದ ಧಾರ್ಮಿಕ ಸಾಹಿತ್ಯ ರಚನೆಯಾಗಿದೆ. ಕರ್ನಾಟಕ ಮಾತ್ರವಲ್ಲದೆ ಇಡೀ ವಿಶ್ವಕ್ಕೆ ವಿಶಿಷ್ಟವಾದ ವಚನ ಸಾಹಿತ್ಯವನ್ನು ನೀಢಿದು ಬೀದರ ಜಿಲ್ಲೆಯಾಗಿದೆ ಹನ್ನೆರಡನೆಯ ಶತಮಾನದ ಅಂದಿನ ಸಮಾಜಿಕ, ಧಾರ್ಮಿಕ ಆರ್ಥಿಕ ಹಾಗೂ ಸಾಂಸ್ಕೃತಿಕ ಚಳುವಳಿಯ ಕೇಂದ್ರ ಬಿಂದುವಾಗಿದ್ದು ಜಿಲ್ಲೆಯ ಬಸವಕಲ್ಯಾಣದಲ್ಲಿ ನೂಲಿನ ಎಳೆಯಾಗಿ ನೇಯ್ದರು ಅವರ ಸಮಾಜೋ ಧಾರ್ಮಿಕ ಹೋರಾಟದ ಉಪ ಸೃಷ್ಟಿಯಾಗಿ ವಚನ ಸಾಹಿತ್ಯ ಮೂಡಿ ಬಂದಿತು. ಕ್ರಾಂತಿಯ ನಾಯಕನೆನಿಸಿದ ಬಸವಣ್ಣ ಅಲ್ಲಮ್ಮ ಮುಂತಾದ ನೂರಾರು ಶರಣ ಶರಣೆಯರು ಜಿಡ್ಡಗಟ್ಟಿದ ಅಂದಿನ ಅನಿಷ್ಠತೆಗಳು ಅಸಮಾನತೆಗಳನ್ನು ಬೇರು ಸಹಿತ ಕಿತ್ತೊಗೆಯುವುದಕ್ಕೆ ಹೋರಾಟ ಕೈಕೊಂಡದ್ದು

ಚರಿತ್ರೆಯಲ್ಲಿಯೇ ಅತ್ಯಂತ ಅಪರೂಪ ವೆನಿಸಿದೆ ವಚನ ಸಾಹಿತ್ಯದ ಪ್ರಭಾವ ಕೇವಲ ಆ ಕಾಲಕ್ಕಷ್ಟೇ ಸೀಮಿತವಾಗದೆ ಅದು ಇಪ್ಪತ್ತನೆ ಶತಮಾನದ ಅನೇಕ ಕವಿ ಬರಹಗಾರ ಮೇಲಾಗಿರುವುದನ್ನು ಅಧ್ಯಯನದಿಂದ ಕಂಡು ಕೊಳ್ಳುಬಹುದಾಗಿದೆ.

12ನೆ ಶತಮಾನದ ನಂತರ ಉಂಟಾದ ರಾಜಕೀಯ ಸ್ಥಿತ್ಯಂತರಗಳು ಜಿಲ್ಲೆಯ ಸಾಹಿತ್ಯದ ಮೇಲೂ ಪರಿಣಾಮವನ್ನುಂಟು ಮಾಡಿದವು ಜಿಲ್ಲೆಯನ್ನಾಳಿದ ಮುಸ್ಲಿಂ ಮತ್ತು ಮರಾಠಿ ಅರಸರ ಪ್ರಭಾವಗಳಿಂದಾಗಿ ಉರ್ದು, ಮರಾಠಿ ಭಾಷೆಗಳು ಇಲ್ಲಿನ ಭಾಷೆ ಮತ್ತು ಸಾಹಿಯದಲ್ಲಿ ಹಾಸಹೊಕ್ಕಾಗಿದೆ ಈ 16ನೇ ಶತಮಾನದಲ್ಲಿ ಈ ಪ್ರದೇಶದಲ್ಲಿ ಮರಾಠಿ ಸಾಹಿತ್ಯವೂ ಹುಟ್ಟಿ ಬೆಳೆಯಿತು ವಚನ ಸಾಹಿತ್ಯ ಉರ್ದುವಿನ ಸೂಫೀ ಸಾಹಿತ್ಯ ಹಾಗೂ ಮರಾಠಿ ಸಾಹಿತ್ಯಗಳ ಪ್ರಭಾವ 18ನೆ ಶತಮಾನದಿಂದ ಇಲ್ಲಿನ ತತ್ವಪದ ಸಾಹಿಯ ಮೆಲಾಗಿರುವುದನ್ನು ಗುರುತಿಸ ಬಹುದಾಗಿದೆ.

ಒಂದು ಕಾಲಕ್ಕೆ ವಚನ, ತತ್ವಪದಗಳ ಸಮೃದ್ಧಿಯನೇ ಕನ್ನಡ ಸಾಹಿತ್ಯಕ್ಕೆ ನೀಡಿದ ಬೀದರ ಜಿಲ್ಲೆ ಮತ್ತೊಮ್ಮೆ ಅಂತಹುದ್ದೆ ಸಮೃದ್ಧಿಯನ್ನು ಕಂಡುದ್ದು 20ನೇ ಶತಮಾನದ ನಾಲ್ವತ್ತರ ದಶಕ ದಿಂದೀಚೇಗೆ ಎನ್ನಬೇಕು.

ಈ ಸಂಕ್ರಮ ಕಾಲದಲ್ಲಿ ಇಲ್ಲಿನವರು ಕನ್ನಡ ಭಾಷೆಯ ಉಳುವಿಗಾಗಿ ದೊಡ್ಡದಾದ ಹೋರಾಟವನ್ನೆ ಮಾಡಬೇಕಾಗಿ ಬಂದಿದ್ದು ಉಪರ್ಯಾಸವೇಸರಿ 40ರ ದಶಕದಲ್ಲಿ ಆಧುನಿಕ ಶಿಕ್ಷಣ ಸೌಲಭ್ಯ ಪಡೆದ ಅನೇಕರು ಕನ್ನಡ ಭಾಷೆ ಹಾಗೂ ಸಾಹಿತ್ಯದ ಒಂದು ಹಿನ್ನೇಲೆಯಲ್ಲಿಯೇ ಕಾವ್ಯ ಸಣ್ಣಕಥೆ, ಕಾದಂಬರಿ, ವಿಮರ್ಶೆ ಮುಂತಾದ ಪ್ರಕಾರಗಳಲ್ಲಿ ಕೃಷಿಗೆ ತೊಡಗಿದ್ದರು ಕರ್ನಾಟಕದ ಉಳಿದ ಪ್ರದೇಶಗಳ್ಳಲಿ ನವೂದಯದಿಂದ ನವ್ಯ ಪಂಥದ ಹಂತ ತಲುಪಿದ್ದ ವೇಳೆಯಲ್ಲಿ ಬೀದರ ಜಿಲ್ಲೆಯಲ್ಲಿ ನವೋದಯ ತನ್ನ ಹೆಜ್ಜೆಯನ್ನುಇಡುತ್ತಿತ್ತು.

ಜಿಲ್ಲೆಯ ಮೊದಲ ತಲೆಮಾರಿನ ಕವಿಬರಹಗಾರರಲ್ಲಿ ಡಾ॥ ಜಿ.ಬಿ ವಿಸಾಜಿ ಬಸವರಾಜ ಸೈನಿರ, ಡಾ॥ ಮಾಣಿಕರಾವ ಧನಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿ ಕೆ.ಜಿ ಮಾಶೆಟ್ಟಿ ಮುಂತಾದ ಪ್ರಮುಖರಾಗಿದ್ದರ. ಎರಡನೇ ತಲೆಮಾರಿನಲ್ಲಿ ಕವಿ ಲೇಖಕರ ಸಂಖ್ಯ ಬೆಳೆಯುತ್ತ ಬಂದಿತು ಅವರುಗಳಲ್ಲಿ ಡಾ॥ ಕಾಶಿನಾಥ ಅಂಬಲಗೆ, ದೇಶಪಾಂಡೆ ಹುಡಗಿ, ಎಂ.ಜಿ. ಗಂಗನಪಳ್ಳಿ, ಎಂ ಜಿ ದೇಶಪಾಂಡೆ ವೀರೇಂದ್ರ ಸಿಂಪಿ ಡಾ॥ ವಿಜಯಶ್ರೀ ಸಬರದ, ಡಾ॥ ಪ್ರೇಮಾ ಸಿರ್ಸೆ, ಯಶೋದಮ್ಮ ಸಿದ್ಧಬಟ್ಟೆ, ವಿಶಾಲಾಕ್ಷ ಕರಡ್ಡಿ ಡಾ॥ ಸೋಮನಾಥ ಯಳವಾರ, ಡಾ॥ ಜಗನ್ನಥ ಹೆಬ್ಬಾಳೆ ಪ್ರಮುಖರೆನಿಸುತ್ತರೆ.

ಮೂರನೆಯ ತಲೆಮಾರಿನರಾಗಿ ಬರೆಯುವರಲ್ಲಿ ಶ್ರೀಕಾಂತ ಪಾಟೀಲ್, ಮಂವಾ ಬೋರಾಕರ, ಡಾ॥ ಶಿವಗಂಗಾಮ್ಮಾ, ಶಿವುಕುಮಾರ ನಾಗವಾರ, ಡಾ॥ ಜಯದೇವಿ ಗಾಯಕವಾಡ, ಕವಿತಾ ಮಲ್ಲಪ, ಡಾ॥ ನೀಲಾಂಭಿಕಾ ಪೋಲೀಸ ಪಾಟೀಲ್ , ಕೆ.ನೀಲಾ ಹಂಕವಿ ಇತರ ಅನೇಕರು ಹೊಸ ಹೊಸ ಸಂವೇಧನೆಗಳೊಂದಿಗೆ ಸಾಹಿತ್ಯದ ಅನೇಕ ಪ್ರಕಾರ ಗಳಲ್ಲಿ ವಿಶಿಷ್ಟ ಅಭಿವ್ಯಕ್ತ ಜಿಲ್ಲೆಯ ಆಧುನಿಕ ಸಾಹಿತ್ಯ ಪರಂಪರೆಯನ್ನು ಚಲನ ಶೀಲ ವಾಘಿಸಿದ್ದಾರೆ ಇವರು ಗಳಲಿ ಅನೇಕರು ಚುಟುಕು ಕವಿತೆಗಳಲ್ಲಿ ಗಮನರ್ಹಾ ಸಾಧನೆ ಮಾಡಿದರಾಗಿದ್ದಾರೆ.

# ಅಧ್ಯಾಯ – 3 ಬೀದರ ಜಿಲ್ಲೆಯ ಚುಟುಕು ಕವಿಗಳು – ಸಮೀಕ್ಷೆ.

3.1 ಪೀಠಿಕೆ

3.2 ಮೊದಲನೇ ಘಟ್ಟದ ಕವಿಗಳು

3.3 ಎರಡನೇ ಘಟ್ಟದ ಕವಿಗಳು

3.4 ಮೂರನೇ ಘಟ್ಟದ ಕವಿಗಳು

ಅಧ್ಯಾಯ-3

# ಬೀದರ ಜಿಲ್ಲೆಯ ಚುಟುಕು ಕವಿಗಳು – ಸಮೀಕ್ಷೆ

## 3.1 ಪೀಠಿಕೆ

ಕರ್ನಾಟಕದ ಶಿರೋಮುಕುಟವೆನಿಸಿದ ಬೀದರ ಜಿಲ್ಲೆ ಕಲೆ, ಚರಿತ್ರೆ, ಭಾಷೆ, ಸಾಹಿತ್ಯ ಸಾಂಸ್ಕೃತಿಕವಾಗಿ ಅತ್ಯಂತ ಮಹತ್ವವೆನಿಸಿದೆ. ಅದರಲ್ಲೂ ಹಲವಾರು ಧರ್ಮ, ಭಾಷೆ, ಜನಾಂಗಗಳ ಸಂಗಮವಾಗಿರುವ ಜಿಲ್ಲೆ ಕನ್ನಡ ಸಾಹಿತ್ಯಕ್ಕೆ ತನ್ನದೇ ಆದ ವಿಶಿಷ್ಟ ಕೊಡುಗೆ ನೀಡಿದೆ. ಕ್ರಿ.ಶ. 9ನೇ ಶತಮಾನದಷ್ಟು ಪ್ರಾಚೀನವಾಗಿರುವ ಕನ್ನಡದ ಮೊದಲ ಉಪಲಬ್ಧ ಗದ್ಯಕೃತಿ ವಡ್ಡಾರಾಧನೆಯ ರಚನೆಗೆ ಭೂಮಿಕೆ ಜಿಲ್ಲೆಯೇ ಆಗಿರುವುದು. ಇಡೀ ವಿಶ್ವದಲ್ಲಿಯೇ ವಿಶಿಷ್ಟವೆನಿಸಿದ ವಚನ ಸಾಹಿತ್ಯದ ಸೃಷ್ಟಿ ಬೀದರ ಜಿಲ್ಲೆಯಲ್ಲಾಗಿದೆ. ಭಾರತೀಯ ನ್ಯಾಯಾಂಗ ರಾಜ್ಯಾಂಗ ಕುರಿತು ಮಹತ್ವದ ಉಲ್ಲೇಖವೆನಿಸಿರುವ ಮಿತಾಕ್ಷರ, ಹಾಗೂ ಅದರ ಕರ್ತೃ ವಿಜ್ಞಾನೇಶ್ವರನು ಜನಿಸಿದ್ದು ಜಿಲ್ಲೆಯಲ್ಲಿಯೇ ಇಷ್ಟೇ ಅಲ್ಲದೆ, ಕೀರ್ತನ ಸಾಹಿತ್ಯ, ತತ್ವ ಪದ ಸಾಹಿತ್ಯ ಸೂಫಿ ಸಾಹಿತ್ಯ ದಖನಿ ಕಾವ್ಯ ಪದ್ಧತಿಗಳೆಲ್ಲವೂ ಬೀದರ ಜಿಲ್ಲೆಯ ವಿಶಿಷ್ಟ ಕೊಡುಗೆಗಳೆನಿಸಿವೆ. ಜಿಲ್ಲೆಯ ಸಾಹಿತ್ಯ ಎಲ್ಲಿಯೂ ಹರಿಗಡದೆ ಅದು ಆಯಾ ಕಾಲಕ್ಕೆ ಜನತೆಯ ಆಶೋತ್ತರಗಳಿಗೆ ಸ್ಪಂದಿಸುತ್ತ ಆಧುನಿಕ ಕುಲದಲ್ಲಿಯೂ ಮುಂದುವರಿಯುತ್ತ ಬಂದಿದೆ. ಇದಕ್ಕೆ ಜ್ವಲಂತ ಸಾಕ್ಷಿಯೇ ಹೊಸಗನ್ನಡ ಸಾಹಿತ್ಯವಾಗಿದೆ ಎನ್ನಬೇಕು.

ಹೊಸಗನ್ನಡ ಸಾಹಿತ್ಯದ ಎಲ್ಲ ಚಳುವಳಿಗಳಿಗೂ ಸ್ಪಂದಿಸಿದ ಜಿಲ್ಲೆಯ ಕವಿಗಳು ಆಯಾ ಕಾಲದ ಚಳುವಳಿಗಳ ಸೈದ್ಧಾಂತಿಕ ತತ್ವಗಳನ್ನು ಕವಿತೆಗಳಲ್ಲಿ ಅಭಿವ್ಯಕ್ತಿಸಿರುವರು. ಬದುಕು ಹಲವಾರು ಆಶೋತ್ತರಗಳಿಗೆ ಕನ್ನಡಿಯಾಗಿದೆ. ಬದುಕಿನ ಸ್ವರೂಪ ಬದಲಾದಂತೆ ಬದುಕಿನ ಅಭಿವ್ಯಕ್ತಿಯಾದ ಸಾಹಿತ್ಯದ ಹರವಿನಲ್ಲೂ ಅನೇಕ ಸ್ಥಿತ್ಯಂತರಗಳು ಆಗುತ್ತವೆ. ಈ ಸ್ಥಿತ್ಯಂತರಗಳು ಸಾಮಾಜಿಕ ರಾಜಕೀಯ-ಧಾರ್ಮಿಕ ಆರ್ಥಿಕ ಹಾಗೂ ಸಾಂಸ್ಕೃತಿಕ ಆಂದೋಲನ ಅಥವಾ ಚಳುವಳಿಗಳಿಗೆ ಬೀಜರೂಪಣಗಳಾಗಿ ಮುನ್ನಡೆಯುವವು. ಈ ಎಲ್ಲಾ ಪರಸ್ಥಿತಿ ಸವಾಲುಗಳನ್ನು ಅರ್ಥೈಸಿಕೊಳ್ಳುವ ಶಕ್ತಿ ಕವಿಗೆ ಇರುವುದರಿಂದ ಈ ಹೊತ್ತಿಗೂ ಕವಿ ನಮಗೆ ಮುಖ್ಯವೆನಿಸುತ್ತದೆ.

ಯಾವುದೇ ಕವಿ ತನ್ನ ಕಾಲದ ಆಶೋತ್ತರಗಳನ್ನು, ಏಳು ಬೀಳುಗಳನ್ನು, ಹಾಸು ಬೀಸುಗಳನ್ನು ಕಾವ್ಯದಲ್ಲಿ ಸಮರ್ಥವಾಗಿ ಅಭಿವ್ಯಕ್ತಿಸುವ ಕಾರ್ಯಕ್ಕೆ ತನ್ನ ಮನಸ್ಸನ್ನು ಮುಕ್ತಗೊಳಿಸಿದ್ದರಿಂದಾಗಿಯೇ ಆತ ಶ್ರೇಷ್ಠನೆನಿಸುತ್ತಾನೆ. ಈ ದೃಷ್ಟಿಯಿಂದ ಇತಿಹಾಸ ಮತ್ತು ಪರಂಪರೆಯ ಸತ್ವವನ್ನು ಅರಗಿಸಿಕೊಂಡು, ಅವುಗಳ ಪ್ರಜ್ಞೆಯನ್ನು ಇಟ್ಟುಕೊಂಡು ಸಮಕಾಲೀನ ಸ್ಥಿತಿಗತಿಗಳ ಹಿನ್ನೆಲೆಯಲ್ಲಿ ಜಿಲ್ಲೆಯ ಕವಿಗಳಿಂದ ಕಾವ್ಯ ಸೃಷ್ಟಿ ನಡೆದಿದೆ ಅವರು ನೆಲದ ಮಣ್ಣಿನಲ್ಲಿ ತಮ್ಮ ಬೇರುಗಳನ್ನು ಕಂಡುಕೊಂಡು ಮಹತ್ವವೆನಿಸುವ ಸಿದ್ಧಿ-

ಸಾಧನೆಗಳಿಗೆ ಬಾಜನಾಗಿದ್ದಾರೆ. ಕವಿಗಳು ತಮ್ಮದೇ ವಿಶಿಷ್ಟ ಕಲೆಗಾರಿಕೆಯಿಂದ ಪರಿಪೂರ್ಣ ವ್ಯಕ್ತಿತ್ವದಿಂದ ಸಾಹಿತ್ಯವನ್ನು ದಾರ್ಶನಿಕ ನೆಲೆಗೆ ಕೊಂಡೊಯ್ದಿರುವರು. ಆ ಮೂಲಕ ದೇಶ, ಕಾಲ ಪರಂಪರೆಗೆ ವಿಶಿಷ್ಟ ಕಾಣಿಕೆಯಾಗಿರುವರು ಹೊಸಗನ್ನಡದ ಮಹತ್ವದ ಕವಿಗಳು, ಚುಟುಕು ಕವಿಗಳನ್ನು ಕೃತಿಗಳನ್ನು ಕುರಿತು ಇಲ್ಲಿ ಸಂಕ್ಷೇಪವಾಗಿ ಸಮೀಕ್ಷಿಸಿ ನೋಡಲಾಗಿದೆ.

ಕಾಲಕಾಲಕ್ಕೆ ಸಂಭವಿಸಿದ ರಾಜಕೀಯ ಸಾಮಾಜಿಕ, ಧಾರ್ಮಿಕ, ಭಾಷಿಕ ಹಾಗೂ ಸಾಂಸ್ಕೃತಿಕ ಆಕ್ರಮಣಗಳು, ಜಿಲ್ಲೆಯ ಸಾಹಿತ್ಯದ ಮೇಲೆ ಅತ್ಯಂತ ಪರಿಣಾಮ ಬೀರಿವೆ. ಒಂದು ಕಾಲದಲ್ಲಿ ವಚನ ಸಾಹಿತ್ಯವನ್ನು ಕನ್ನಡ ಸಾಹಿತ್ಯಕ್ಕೆ ಕೊಡುಗೆ ನೀಡಿದ ಬೀದರ ಜಿಲ್ಲೆ ಮಧ್ಯ ಯುಗದಲ್ಲಿ ಬಹಮನಿ, ಶಾಹಿ ಆನಂತರದಲ್ಲಿ ಹೈದ್ರಾಬಾದಿನ ನಿಜಾಮರ ಆಳ್ವಿಕೆಗೆ ಒಳಪಟ್ಟು ಇಲ್ಲಿನ ಕನ್ನಡ ಭಾಷೆ, ಶಿಕ್ಷಣ ಹಾಗೂ ಸಾಹಿತ್ಯಗಳ ಮೇಲೆ ವ್ಯತಿರಿಕ್ತವಾದ ಪರಿಣಾಮ ಬೀರಿದವು. ಹೀಗಾಗಿ, ಇಲ್ಲಿನವರು ಒಟ್ಟಿಗೇ ಭಾಷೆ, ಸಾಹಿತ್ಯದ ಸಂರಕ್ಷಣೆಯ ಜೊತೆ ಜೊತೆಗೆ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಅನಿವಾರ್ಯತೆ ಎದುರಿಸಬೇಕಾಗಿತ್ತು ಹೀಗಾಗಿ ಆಧುನಿಕ ಶಿಕ್ಷಣದಿಂದ ವಂಚಿತರಾದ ಹೈದ್ರಾಬಾದ ಕರ್ನಾಟಕದ ಜನರು ಅದರಲ್ಲೂ ವಿಶೇಷವಾಗಿ ಬೀದರ ಜಿಲ್ಲೆಯ ಜನತೆ ಮೊದಲು ಕನ್ನಡ ಭಾಷಾ ಶಿಕ್ಷಣ ಕಲಿಕೆಗೆ ಆದ್ಯತೆ ನೀಡಿದರು.

ಇಪ್ಪತ್ತನೆಯ ಶತಮಾನದ ನಾಲ್ಕನೇ ದಶಕದವರೆಗೂ ಇಲ್ಲಿ ಕನ್ನಡ ಮಾಧ್ಯಮ ಶಾಲೆಗಳಿರಲಿಲ್ಲ. ಭಾಲ್ಕಿಯ ಚನ್ನಬಸವ ಪಟ್ಟದ್ದೇವರ ವಿಶ್ವ ಪ್ರಯತ್ನದಿಂದ ಅಂದಿನ ಬೀದರ ಜಿಲ್ಲೆಯ ಮೋರಗಿಯಲ್ಲಿ ಕನ್ನಡ ಭಾಷಾ ಮಾಧ್ಯಮದ ಶಾಲೆ ಪ್ರಾರಂಭವಾಯಿತು. ಪೂಜ್ಯರ ಈ ಪ್ರಯತ್ನದಿಂದ ಪ್ರಭುರಾವ ಕಂಬಳಿವಾಲೆ ಆರ್.ಪಿ. ಬಿಡಪ್ಪ ಭೀಮಣ್ಣ ಖಂಡ್ರೆ, ಶಿವಶರಣಪ್ಪ ವಾಲಿ ಚನ್ನಬಸಪ್ಪ, ಹಾಲಳ್ಳಿ ಮೊದಲಾದವರು 20ನೇ ಶತಕದ 4–5ನೇ ದಶಕದ ಜಿಲ್ಲೆಯಲ್ಲಿ ಕನ್ನಡ ಮಾಧ್ಯಮ ಶಿಕ್ಷಣದ ಪ್ರಸಾರ ವಿಸ್ತರಣೆಗೆ ಹೆಜ್ಜೆಯಿಟ್ಟರು. ಈ ಶತಮಾನದ 5–6ನೇ ದಶಕಗಳಲ್ಲಿ ಕನ್ನಡ ಶಿಕ್ಷಣ ಪಡೆದು ಅದರಿಂದ ಪ್ರೇರಿತರಾಗಿ ಅನೇಕರು ಕನ್ನಡ ಸಾಹಿತ್ಯ ಚಟುವಟಿಕೆಗಳನ್ನು ಪ್ರಾರಂಭಿಸಿದರು.

---

1– ಪ್ರೊ. ವೀರೇಂದ್ರ ಸಿಂಪಿ ಬೀದರ ಜಿಲ್ಲಾ ದರ್ಶನ ಪು. 141 ಪ್ರಾ.ಡಾ. ಸೋಮನಾಥ ಯಾಳವಾರ, ಡಾ. ಪ್ರೇಮಾ ಸಿರ್ಸೆ ಗು.ವಿ.ವಿ. 2005.

## 3.2 ಮೊದಲನೇ ಘಟ್ಟದ ಕವಿಗಳು

ಬೀದರ ಮಟ್ಟಿಗೆ 20ನೇ ಶತಮಾನದ 5ರ ದಶಕದಲ್ಲಿ ನವೋದಯ ಸಾಹಿತ್ಯ ಚಳುವಳಿ ಅಡಿಯಿಟ್ಟಿತೆಂದು ಹೇಳಬಹುದು ಕರ್ನಾಟಕದಲ್ಲಿ ಈ ಕಾಲವು ನವ್ಯ ಚಳುವಳಿಯ ಏರಿಕೆಯ ಕಾಲವಾಗಿತ್ತು. ಇದಕ್ಕಿರುವ ಕಾರಣಗಳೇನು ಎಂಬುದನ್ನು ಈ ಹಿಂದೆಯೇ ಚರ್ಚಿಸಿರುವೆವು. ನಮ್ಮವರಿಗೆ ತಡವಾಗಿ ದಕ್ಕಿದ ಸ್ವಾತಂತ್ರ್ಯ ಹೊಸ ಶಿಕ್ಷಣ, ಹೊಸ ಸಾಹಿತ್ಯದ ಓದು ಇವೇ-ಮುಂತಾದವುಗಳೇ ಇಲ್ಲಿ ತಡವಾಗಿ ಸಾಹಿತ್ಯ ಚಟುವಟಿಕೆಗಳು ಪ್ರಾರಂಭವಾಗಲು ಕಾರಣಗಳಾಗಿರಬೇಕೆಂದು ಊಹಿಸಬಹುದಾಗಿದೆ.

ನವೋದಯದ ಪ್ರಥಮ ಹಂತದ ಕವಿಗಳಾಗಿ ಜಿಲ್ಲೆಯ ಪ್ರೊ. ಜಿ.ಬಿ. ವಿಸಾಜಿಯವರು ಮರಾಠಿ ಮತ್ತು ಉರ್ದು ಮಯ ವಾತಾವರಣವಿದ್ದ ಭಾಲ್ಕಿಯಲ್ಲಿ ಕನ್ನಡ ಪರ ಚಟುವಟಿಕೆಗಳನ್ನು ಹಾಕಿಕೊಂಡು ಕೆಲಸ ಮಾಡಿದರು. ಅನೇಕರಿಗೆ ಕವಿತೆಗಳನ್ನು ಬರೆಯುವಂತೆ ಮಾಡಿದರಲ್ಲದೇ ತಾವೂ ಕವಿಗಳಾಗಿ ಬೆಳೆದರು. ಕನ್ನಡ ಸಂಘದ ಮುಖಾಂತರ ಕವಿಗೋಷ್ಠಿಗಳನ್ನು ಏರ್ಪಡಿಸುವುದು. ವಿದ್ಯಾರ್ಥಿ ಸಂಚಿಕೆಗಳನ್ನು ರಚಿಸಿ ಪ್ರಕಟಿಸಿ ಅದರಲ್ಲಿ ಕವಿತೆಗಳನ್ನು ಬೆಳಕು ಕಾಣಿಸಿದರು. 60ರ ದಶಕದಲ್ಲಿ ಡಾ.ಜಿ.ಬಿ. ವಿಸಾಜಿಯವರು ಮುಂಜಾವು ಕವನ ಸಂಕಲನವನ್ನು ಪ್ರಕಟಿಸಿದರು. ಪ್ರಾಯಶಃ ಇದುವೇ ಬೀದರ ಜಿಲ್ಲೆಯ ಪ್ರಥಮ ಕನ್ನಡ ಕವನ ಸಂಕಲನವಾಗಿರಬೇಕೆನ್ನಲಾಗಿದೆ.

ಮುಂಜಾವು ಕವನ ಸಂಕಲನದಲ್ಲಿ ಕನ್ನಡ ಭಾಷೆ ಕರ್ನಾಟಕದ ವೈಭವವನ್ನು ಕುರಿತಾಗಿರುವ ಕವನಗಳೇ ಹೆಚ್ಚಾಗಿರುವುದನ್ನು ಕಾಣುತ್ತೇವೆ. ಇದರ ಜೊತೆಗೆ ಸಾಮಾಜಿಕ ಸಮಸ್ಯೆಗಳಿಗೆ ತೀವ್ರ ಸ್ಪಂದಿಸುವಂಥ ಕವನಗಳನ್ನು ಬರೆದು ಬೇಗನೆ ಜಿಲ್ಲೆಯ ಅನೇಕರ ಮೆಚ್ಚುಗೆ ಗಳಿಸಿದರು. ಇಂದಿಗೂ ಕಾವ್ಯ ರಚನೆಯಲ್ಲಿ ತೊಡಗಿಸಿಕೊಂಡಿರುವ ಕವಿ ಜಿಲ್ಲೆ ಅಷ್ಟೇ ಏಕೆ ರಾಜ್ಯದ ಮಟ್ಟಿಗೂ ಹೆಸರು ಮಾಡಿದ್ದಾರೆ.

ಡಾ. ವಿಸಾಜಿಯವರ ಸಮಕಾಲೀನರಾಗಿ ಕಾವ್ಯ ರಚನೆಗೆ ತಮ್ಮನ್ನು ತೊಡಗಿಸಿಕೊಂಡ ಬಸವರಾಜ ಸೈನೀರ ಬಸವರಾಜ ಅವರು ನವೋದಯ ಶೈಲಿಯ ಕವನಗಳನ್ನು ಬರೆದು ಬೆಳಗಾಯಿತು. ಎಂಬ ಕವನ ಸಂಕಲನ ರೂಪದಲ್ಲಿ ಪ್ರಕಟಿಸಿದರು ಇದೇ ಸಮಯದಲ್ಲಿ ಡಾ. ಮಾಣಿಕರಾವ ಧನಶ್ರೀ ಅವರು ದೀರ್ಘ ಕವನಗಳನ್ನಲ್ಲದೆ ಮಕ್ಕಳಿಗಾಗಿ ಶಿಶು ಪ್ರಾಸಗಳನ್ನು ರಚಿಸಿದರು. ಈ ಸಂಕಲನಗಳಲ್ಲಿ ಉಜ್ವಲ ರಾಷ್ಟ್ರ ಹಾಗೂ ನಾಡ ಪ್ರೇಮವನ್ನು ಮಾಡಿಸುವಂಥ ಕವನಗಳಿವೆ.

ಬೀದರ ಜಿಲ್ಲೆಯ ಹಿರಿಯ ತಲೆಮಾರಿನ ಉಳಿದ ಕವಿಗಳಲ್ಲಿ ಶ್ರೀ ಪಂಚಾಕ್ಷರಿ ಪುಣ್ಯ ಶೆಟ್ಟಿಯವರು ಪ್ರಮುಖ ಕವಿಯಾಗಿದ್ದಾರೆ. ಇವರು ಮೂಲತಃ ಗುಲಬರ್ಗಾ ಜಿಲ್ಲೆಯ ಚಿಂಚೋಳಿ ತಾಲೂಕಿನ ಐನೋಳ್ಳಿಯವರಾದರೂ ಬಹಳ ಕಾಲದಿಂದ ಬೀದರನ್ನೇ ತಮ್ಮ ಕಾರ್ಯ ಕ್ಷೇತ್ರವನ್ನಾಗಿಸಿಕೊಂಡಿದ್ದಾರೆ. ರಾಷ್ಟ್ರ

ಪ್ರೇಮ ಹುಟ್ಟಿಸುವಂಥ ಹಲವು ಕವಿತೆಗಳನ್ನು ಚಂದ್ರಶೇಖರ ಆರ್ಭೂದ ಅವರನ್ನು ಕುರಿತು ಮಕ್ಕಳ ನಾಟಕ ಬರೆದು ಎಲ್ಲರ ಗಮನ ಸೆಳೆದರು. ಹನಿಗವನ ಅಥವಾ ಚುಟುಕು ಕವಿತೆಗಳನ್ನು ಬರೆದು ಮುಂಚೂಣಿಯಲ್ಲಿ ನಿಲ್ಲುವ ಕವಿಯೆಂದರೆ ಕೆ.ಜಿ. ಮಾಶೆಟ್ಟಿಯವರು ಅವರು ಬೀದರ ಜಿಲ್ಲೆಯ ಹುಮನಾಬಾದ ತಾಲೂಕಿನ ಹುಡುಗಿ ಗ್ರಾಮದವರು ಇವರು ಚುಟುಕುಗಳಲ್ಲಿ ಪ್ರಕೃತಿ ಸಾಮಾಜಿಕ ವಿಡಂಬನೆ, ನಾಡ-ನುಡಿ ಪ್ರೇಮ ಎದ್ದು ಕಾಣುತ್ತವೆ. ಈಗಾಗಲೇ ಚುಟುಕುಗಳಿಗೆ ಸಾಹಿತ್ಯ ರೂಪಕೊಟ್ಟು ಅದನ್ನು ಒಂದು ಪ್ರಕಾರ ಸಾಹಿತ್ಯವಾಗಿಸಿದ ದಿನಕರ ದೇಸಾಯಿಯವರ ಚುಟುಕಗಳ ಪ್ರಭಾವದಿಂದ ಮಾಶೆಟ್ಟಿಯವರು ತಾವೂ ಅವರನ್ನು ಅನುಸರಿಸಿ ಪ್ರಯೋಗ ಮಾಡಿದ್ದಾರೆ. ಒಂದರ್ಥದಲ್ಲಿ ಬೀದರ ಜಿಲ್ಲೆಯ ಮೊದಲ ಚುಟುಕು ಕವಿಯೆಂಬ ಹೆಗ್ಗಳಿಕೆಗೂ ಅವರು ಪಾತ್ರರಾಗುತ್ತಾರೆ.

ಇಪ್ಪತ್ತನೆಯ ಶತಮಾನದ ಆರಂಭದೊಂದಿಗೆ ಕನ್ನಡ ಕಾವ್ಯಕ್ಕೆ ನವ ಮಾರ್ಗವನ್ನು ಹಾಕಿಕೊಟ್ಟ ನವೋದಯ ಸಾಹಿತ್ಯ ಪ್ರಮುಖವಾಗಿ ಪ್ರಕೃತಿ ಪ್ರೇಮ, ರಾಷ್ಟ್ರೀಯತೆ, ಆಧ್ಯಾತ್ಮಿಕತೆ ನಾಡ-ನುಡಿ ಮಮತೆ ಮುಂತಾದವುಗಳನ್ನು ಪ್ರಧಾನ ಸ್ಥಾಯಿಯಾಗಿಸಿಕೊಂಡಿತು. ನವೋದಯದ ಎಲ್ಲ ಲಕ್ಷಣಗಳನ್ನು ಹೊತ್ತುಕೊಂಡೇ ಬೀದರ ಜಿಲ್ಲೆಯ ನವೋದಯ ಕಾವ್ಯ ಬೆಳೆಯಿತೆನ್ನಬೇಕು ಕರ್ನಾಟಕದ ಸಂದರ್ಭದಲ್ಲಿ ಆಧುನಿಕ ಕನ್ನಡ ಸಾಹಿತ್ಯದ ಮೊದಲ ಘಟ್ಟದಲ್ಲಿ ಕಾರ್ಯ ನಿರ್ವಹಿಸಿದ ಬಿ.ಎಂ. ಶ್ರೀ ಕಂಠಯ್ಯನವರು ತಮ್ಮ ವಿಶಿಷ್ಟ ಸಾಂಸ್ಕೃತಿಕ ಸಂದರ್ಭದಲ್ಲಿ ಪರಸ್ಪರ ವಿರುದ್ಧವೆನಿಸಬಹುದಾದ ಎರಡು ಜವಾಬ್ದಾರಿಗಳನ್ನು ನಿರ್ವಹಿಸಬೇಕಾಗಿತ್ತು. ಪ್ರಾಚೀನ ರಾಷ್ಟ್ರೀಯ ಮತ್ತು ಪ್ರಾದೇಶಿಕ ಸಾಹಿತ್ಯದ ಉತ್ತಮಾಂಶದ ಕಡೆಗೆ ಓದುಗರ ಗಮನ ಸೆಳೆದು ವಾಚನಾಭಿರುಚಿಯನ್ನು ರೂಪಿಸುವುದು ಮೊದಲ ಹೊಣೆಗಾರಿಯಾಗಿತ್ತು."[2] ಹೆಚ್ಚು ಕಡಿಮೆಯಾಗಿ ಇಂಥದೇ ಆಶಯ ಬೀದರ ಜಿಲ್ಲೆಯ ಕವಿಗಳಲ್ಲಿ ಪ್ರಧಾನವಾಗಿ ಕೆಲಸ ಮಾಡಿದ್ದನ್ನು ಕಾಣಬೇಕು. ಇಲ್ಲಿನ ಕವಿಗಳಿಗಳು ಒಂದು ಕಡೆಗೆ ಕನ್ನಡವನ್ನು ಶಿಕ್ಷಣದ ಮೂಲಕ ಉಳಿಸಬೇಕಾಗಿತ್ತು.

ಮತ್ತು ಅದನ್ನು ಸಾಹಿತ್ಯ ರಚನೆಯಿಂದ ಬೆಳೆಸಿ ಓದುವ ಅಭಿರುಚಿ ಹೆಚ್ಚಿಸುವ ಹೊಣೆ ಈ ಕಾಲದ ಕವಿಗಳ ಮೇಲೆ ಹೆಚ್ಚಿನದಾಗಿತ್ತು. ಬೀದರ ಜಿಲ್ಲೆಯ ಆರಂಭಿಕ ಕವಿಗಳಿಗೆ ನವೋದಯದ ಪ್ರೇರಣೆ ಎರಡು ರೀತಿಯಿಂದ ದಕ್ಕಿತೆನ್ನಬಹುದು.

---

2. ಡಾ. ಗುಂಡಣ್ಣ ಚ. ಕಲಬುರ್ಗಿ ಕಣವಿ ಮತ್ತು ಆಧುನಿಕ ಕಾವ್ಯ ಪರಂಪರೆ ಪು. 24 ಸೌಜನ್ಯ ಪ್ರಕಾಶನ, ಮೂಡಲಗಿ 2000.

ಓದು ಈ ಕಾಲದ ಬೇಂದ್ರೆ ಕುವೆಂಪು, ಪು.ತಿ.ನ. ಮಧುರ ಚೆನ್ನ ಗೋವಿಂದ ಪೈ. ಪಂಜೆ ಮಂಗೇಶರಾಯ, ಡಿ.ವಿ.ಜಿ. ಜಿ.ಪಿ. ರಾಜರತ್ನಂ ಮೊದಲಾದ ಕವಿಗಳ ರಚನೆಗಳನ್ನು ಓದುವುದರ ಮುಖಾಂತರವಾಗಿ ಪಡೆದುಕೊಂಡರೆ ಇನ್ನೊಂದು ಹೈದ್ರಾಬಾದ, ಧಾರವಾಡ ಮುಂತಾದ ಕಡೆ ಡಿ.ಕೆ. ಭೀಮಸೇನರಾವ್ ತವಗ, ಸಿದ್ದಯ್ಯ ಪುರಾಣಿಕ ಮೊದಲಾದವರು ಸಾಹಿತ್ಯ ಚಟುವಟಿಕೆಗಳು ಅವರ ರಚನೆಗಳು ಇಲ್ಲಿನವರನ್ನು ಪ್ರಭಾವಿಸಿ ಸಾಹಿತ್ಯ ಕ್ಷೇತ್ರಗಳಲ್ಲಿ ತೊಡಗುವಂತೆ ಮಾಡಿತೆಂದು ಹೇಳಿದರೆ [illegible] ದಶಕದಲ್ಲಿ [illegible] ಹೆಚ್ಚಿನ [illegible] ಚಟುವಟಿಕೆಗಳು ನಡೆದವು ಎನ್ನಬೇಕು.

## 3.3. ಎರಡನೇ ಘಟ್ಟದ ಕವಿಗಳು

ಹೊಸಗನ್ನಡ ಕಾವ್ಯಕ್ಕೆ ಹೊಸ ದೃಷ್ಟಿ ಹಾಗೂ ಅಭಿವ್ಯಕ್ತಿ ಒದಗಿಸುವ ಪ್ರಯತ್ನಗಳು ಸುಮಾರು 60 ರಿಂದ 70ರ ದಶಕಗಳಲ್ಲಿ ಜಿಲ್ಲೆಯಲ್ಲಿ ನಡೆದವು. ಮೊದಲ ಘಟ್ಟದ ಕವಿಗಳು ನವೋದಯ ದಾಟಿಯ ಭಾವಗೀತೆ ನಾಡಗೀತೆಗಳನ್ನು ಕನ್ನಡಕ್ಕೆ ತರುವ ಪ್ರಯತ್ನ ನಡೆದರೆ, ಎರಡನೆಯ ಘಟ್ಟದಲ್ಲಿ ಕವಿಗಳು ಸಾಮಾಜಿಕ ವಿಭಿನ್ನ ಆಯಾಮಗಳು ಸಮಸ್ಯೆಗಳ ಮೇಲೆ ಕ್ಷ ಕಿರಣ ಬೀರುವಂಥ ಕವಿತೆಗಳನ್ನು ರಚಿಸಿ, ಕಾವ್ಯದಲ್ಲಿ ಹೊಸ ಹೊಸ ಪ್ರಯೋಗಗಳು ನಡೆಸಿದರು. ಅಂಥ ಪ್ರಯೋಗಗಳಲ್ಲಿ ಚುಟುಕುಗಳೂ ಕೂಡ ಪ್ರಮುಖವೆನಿಸಿವೆ.

ಈ ಹೊತ್ತಿನಲ್ಲಿ ಬರೆಯುತ್ತಿದ್ದ ಕವಿಗಳ ಮುಂದೆ ನವೋದಯ ಪ್ರಗತಿಶೀಲ ಹಾಗೂ ನವ್ಯ ಕಾವ್ಯ ಚಳುವಳಿಗಳು ಹಾಯಿದು ಹೋಗಿದ್ದವು. ಅವುಗಳ ಏಳು ಬೀಳುಗಳನ್ನು ಕವಿಗಳು ಕಂಡಿದ್ದರು ಈ ಎಲ್ಲ ತಿಳುವಳಿಕೆಯ ಹಿನ್ನೆಲೆಯಲ್ಲಿ ಜಿಲ್ಲೆಯ ಕಾವ್ಯ ರೂಪುಗೊಂಡಿತು.

60ರಿಂದ 70ರ ದಶಕದಲ್ಲಿ ಬೀದರ ಜಿಲ್ಲೆಯ ಅನೇಕ ತರುಣ ಕವಿಗಳು ತಮ್ಮ ಕವನ ಸಂಕಲನಗಳನ್ನು ಉತ್ಸಾಹದಿಂದಲೇ ಪ್ರಕಟಿಸಲಾರಂಭಿಸಿದರು. ಅವರುಗಳಲ್ಲಿ ಡಾ. ಕಾಶಿನಾಥ ಅಂಬಲಗೆ, ಎಂ.ಜಿ. ಗಂಗನ ಪಳ್ಳಿ ದೇಶಾಂಶ ಹುಡುಗಿ, ಡಾ. ಜಿ.ಬಿ. ವಿಸಾಜಿ, ಡಾ. ಪ್ರೇಮಾ ಸಿರ್ಸೆ, ಡಾ. ವಿಶಾಲಕ್ಷಿ ಕರಡ್ಡಿ, ಯಶೋದಮ್ಮ ಸಿದ್ದಬಟ್ಟೆ, ಡಾ. ವಿಜಯ ಶ್ರೀ ಸಬರದ, ಬಿ.ಬಿ. ಪೂಜಾರ, ಪ್ರಿ. ಎಂ.ಎಂ. ಉಮರಾಣಿ, ಶ್ರೀಮತಿ ಲೀಲಾ ಪಾಟೀಲ ಮೊದಲಾದವರು ಹಲವಾರು ಕವನ ಸಂಕಲನಗಳನ್ನು ಚುಟುಕು ಕವಿತೆಗಳ ಸಂಕಲನವನ್ನು ಪ್ರಕಟಿಸಿ ಜಿಲ್ಲೆಯ ಚುಟುಕು ಸಾಹಿತ್ಯಕ್ಕೆ ಹೊಸ ಬೆಳೆ ನೀಡಿದರು ಎಂದು ಹೇಳಬಹುದು.

ಈವರೆಗೆ ಪ್ರಕೃತಿ ಆರಾಧನೆ, ನಾಡ–ನುಡಿ ಪ್ರೇಮ ಆಧ್ಯಾತ್ಮದ ಬಗೆ ಚಿಂತಿಸಿದ್ದ ಕವಿಗಳು ಎಪ್ಪತ್ತರ ದಶಕದ "ದಲಿತ ಬಂಡಾಯ ಕಾವ್ಯದ ಪ್ರಭಾವಕ್ಕೆ ಒಳಗಾದವರು ಪ್ರತಿಭಟನೆಯನ್ನು ತಮ್ಮ ಅಭಿವ್ಯಕ್ತಿಯ ದಾರಿಯನ್ನಾಗಿ ಮಾಡಿಕೊಂಡರು"[3] ಕವಿಗಳು ನವ್ಯದ ಸ್ಥಗಿತ ಘೋಷಣೆಗಳಿಗೆ ಪ್ರತಿಭಟನೆ ಸಾರುವುದರೊಂದಿಗೆ ಸಮಾಜ ಮುಖಿಯಾಗಿ ಬಯಲುಗೊಳ್ಳುವ ಬಂಡಾಯ ದಲಿತ ಸಂವೇದನೆಗಳ ಬಗ್ಗೆಯೂ ಕಾವ್ಯದಲ್ಲಿ ಪ್ರಕಟಿಸಿದರು.

ರಾಜ್ಯಾದ್ಯಂತ ಚಳುವಳಿ ಹಾಗೂ ಕಾವ್ಯ ರಚನೆಯ ಮೂಲಕ ಸಾಹಿತ್ಯ ಹಾಗು ಸಮಾಜದಲ್ಲಿ ಹೊಸ ಸಂಚಲನವುಂಟು ಮಾಡಿದ ದಲಿತ–ಬಂಡಾಯ ಚಳುವಳಿ ಜಿಲ್ಲೆಯ ಕವಿಗಳ ಮೇಲೆಯೂ ತನ್ನ ಪ್ರಭಾವವನ್ನುಂಟು ಮಾಡಿತು. ಹೊಸಗನ್ನಡ ಸಾಹಿತ್ಯದಲ್ಲಿ

ಹಿಂದೆಂದೂ ಕಾಣದಂಥ ರೀತಿಯಲ್ಲಿ ಸಾಮಾಜಿಕ, ರಾಜಕೀಯ ಪ್ರಜ್ಞೆಯನ್ನು ಪ್ರಕಟಿಸಿರುವ ಬಂಡಾಯ ಸಾಹಿತ್ಯ ಸಂಘಟನೆ ಈಗಾಗಲೇ ತನ್ನ ತಾತ್ವಿಕ ನೆಲೆಯನ್ನು ಪ್ರಣಾಳಿಕೆಯಲ್ಲಿ ಸ್ಪಷ್ಟಪಡಿಸಿದ"[4] ಅದರ ಪ್ರಮುಖ ಅಂಶಗಳನ್ನು ಸಂಗ್ರಹಿಸಿ ಬಂಡಾಯ ಸಾಹಿತಿ ಪ್ರೊ. ಬರಗೂರ ರಾಮಚಂದ್ರಪ್ಪನವರು ಬೇರೊಂದೆಡೆಗೆ ವಿವರಿಸಿರುವರು. ಅವರ ಪ್ರಕಾರ" ನಮ್ಮ ಸಾಂಸ್ಕೃತಿಕ ಕ್ಷೇತ್ರದಲ್ಲಿ ಅನೇಕ ವರ್ಷಗಳಿಂದ ಕಂಡು ಬರುತ್ತಿರುವ ಪ್ರಗತಿಪರ ಧೋರಣೆಗಳು ತೆಗೆದುಕೊಂಡ ತಿರುವುಗಳು, ಎದುರಿಸಿರುವ ಸಮಸ್ಯೆಗಳು ಮತ್ತು ತಲುಪಿದ ಕ್ಷೀಣ ನೆಲೆಗಳನ್ನು ಗಮನಿಸಿದಾಗ, ಅವುಗಳಿಂದ ಪಾಠ ಕಲಿತ ವ್ಯಾಪಕ ಸ್ವರೂಪದ ಸಂಘಟನೆಯ ಅಗತ್ಯ ಗೊತ್ತಾಗುತ್ತವೆ. ಒಕ್ಕೂಟ, ಪ್ರಗತಿ ಪಂಥಗಳ ಸಾಫಲ್ಯ–ವೈಫಲ್ಯಗಳ ದಾಖಲೆ ನಮಗೊಂದು ಎಚ್ಚರದ ಸಂಗತಿಯೂ ಆಗಿವೆ. ನಮ್ಮ ದೇಶದ ಚಾರಿತ್ರಿಕ, ರಾಜಕೀಯ ಬೆಳವಣಿಗೆಗಳ ಸ್ವರೂಪದಿಂದಾಗಿ ಉದ್ಭವಿಸಿದ ಇಂದಿನ ವಿಶಿಷ್ಟ ಸಂದರ್ಭದ ಹಿನ್ನೆಲೆಯಲ್ಲಿ ನಮ್ಮ ಹೋರಾಟದ ನೆಲೆಯನ್ನು ಕಂಡುಕೊಳ್ಳಬೇಕಾಗಿದೆ. ಆನ ವಿರೋಧಿ ನಿಲವುಗಳು, ವಿವಿಧ ಮುಖವಾಡಗಳ ಮರೆಯಲ್ಲಿ ಒಂದಾಗಿ ವಿಜ್ರಂಭಿಸಿತ್ತಿರುವ ಈ ಸಂದರ್ಭ ಪ್ರಗತಿ ಪರ ಧೋರಣೆಯ ಎಲ್ಲರಿಗೂ ಒಂದು ಸವಾಲು"[5] ಈ ಎಲ್ಲ ಸಮಸ್ಯೆ ಸವಾಲುಗಳಿಗೆ ಉತ್ತರ ದಲಿತ ಬಂಡಾಯ ಚಳುವಳಿಯ ಸಮರ್ಥವಾಗಿ ನೀಡಿತು ಎಂದು ಹೇಳಬಹುದಾಗಿದೆ.

---

3. ಡಾ. ವಿಕ್ರಮ ವಿಸಾಜಿ ಬೀದರ ಜಿಲ್ಲಾ ದರ್ಶನ ಪು. 108 ಸಂ. ಡಾ. ಸೋಮನಾಥ ಯಾಳವಾರ ಡಾ. ಪ್ರೇಮಾ ಸಿರ್ಸೆ ಗು.ವಿ.ವಿ. 2005.

4. ಬರಗೂರ ರಾಮಚಂದ್ರಪ್ಪ, ಕನ್ನಡ ಸಾಹಿತ್ಯ ಸಂದರ್ಭ ಪು. 54 ಕಾಸರ, ಡಾ. ಜಿ.ಎಸ್. ಶಿವರುದ್ರಪ್ಪ, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು 1995 5. ಅದೇ – ಪುಟ – 94–95 . . .

ಪಾಲ್ಗೊಳ್ಳಲು ಪ್ರೇರಣೆ ನೀಡಿದವು.

ಎಪ್ಪತ್ತರ ದಶಕದ ದಲಿತ-ಬಂಡಾಯ ಚಳುವಳಿಯ ತೀವ್ರವಾದ ಗಾಳಿ ಜಿಲ್ಲೆಯಲ್ಲೂ ಬೀಸಿತು. ಇದಕ್ಕೆ ಎಡಪಂಥೀಯ ಸಂಘಟನೆ, ಭಾರತ ಜ್ಞಾನ ವಿಜ್ಞಾನ ಸಮಿತಿ, ದಲಿತ ಸಂಘರ್ಷ ಸಮಿತಿ ಎಸ್.ಎಫ್.ಐ. ಸಮುದಾಯ ಮುಂತಾದ ಸಂಘಟನೆಗಳಲ್ಲಿ ಗುರುತಿಸಿಕೊಂಡಿದ್ದ ಕವಿಗಳು ಬಂಡಾಯ ಧೋರಣೆಗಳನ್ನು ಒಪ್ಪಿಕೊಂಡು ಚಳುವಳಿಯ ಸೈದ್ಧಾಂತಿಕ ನಿಲುವುವನ್ನು ಕವಿತೆಗಳಲ್ಲಿ ಅಭಿವ್ಯಕ್ತಿಸಿವರು. ಬಂಡಾಯ ಸಾಹಿತ್ಯ ಚಳುವಳಿಯಲ್ಲಿ ನೇರವಾಗಿ ಪಾಲ್ಗೊಳ್ಳುವುದರ ಮೂಲಕ ಗಮನಾರ್ಹರೆನಿಸಿದ ಕವಿ ಡಾ. ಕಾಶಿನಾಥ ಅಂಬಲಗೆ ಲಕ್ಷ್ಮಾರೆಡ್ಡಿ, ಡಾ. ವಿಜಯಶ್ರೀ ಸಬರದ, ಪ್ರೊ. ಸೂಗಯ್ಯ ಹಿರೇಮಠ ಮುಂತಾದವರು ಕವಿತೆಗಳಲ್ಲಿ ಪ್ರತಿಭಟನೆಯನ್ನು ಖಾರಗೊಳಿಸಿದರು. ಆ ಹೊತ್ತಿನ ಬಂಡಾಯ ಚಳುವಳಿ ಎಷ್ಟೊಂದು ತೀವ್ರ ಪರಿಣಾಮವನ್ನುಂಟು ಮಾಡಿತ್ತೆಂದರೆ ಈ ಚಳುವಳಿಯಲ್ಲಿ ನೇರವಾಗಿ ಪಾಲ್ಗೊಳ್ಳದ ಅದೆಷ್ಟೋ ಕವಿಗಳು ಬಂಡಾಯದ ನಿಲುವುಗಳನ್ನು ತಮ್ಮ ಕವಿತೆಗಳಲ್ಲಿ ಪ್ರಕಟಿಸಿದರೆಂಬುದು ಗಮನಾರ್ಹ.

ಡಾ. ಜಿ.ಬಿ. ವಿಸಾಜಿ, ದೇಶಾಂಶ ಹುಡಗಿ, ಬಂಡೆಪ್ಪ ಖೂಬಾ ಶರಣಯ್ಯಾ ಮಠಪತಿ, ಪ್ರೇಮಾ ಸಿರ್ಸೆ ಮೊದಲಾದವರೂ ತಮ್ಮ ಕವಿತೆಗಳಲ್ಲಿ ಶೋಷಣೆಯ ವಿವಿಧ ಮುಖಗಳ ವಿರುದ್ಧ ಕವಿತೆಗಳಲ್ಲಿ ತೀವ್ರವಾಗಿ ಪ್ರತಿಕ್ರಿಯಿಸಿದ್ದಾರೆ. ಭಾವನಾತ್ಮಕ ನೆಲೆಯಲ್ಲಿ ಬರೆಯುತ್ತಿದ್ದ ಹಿರಿಯ ತಲೆಮಾರಿನ ಕವಿಗಳೂ ಬಂಡಾಯವನ್ನು ಪ್ರಕಟಿಸಿದ್ದನ್ನು ನೋಡಿದರೆ ಈ ಚಳುವಳಿ ಮತ್ತು ಸಾಹಿತ್ಯ ಧೋರಣೆಗಳ ಪ್ರಭಾವ ಎಷ್ಟಿತ್ತೆಂಬುದನ್ನು ಯೋಚಿಸಬೇಕು. ಅನುಭವವನ್ನು ಹೊಸ ರೀತಿಯಲ್ಲಿ ತೆರೆದು ತೋರಿಸಿತು ಎಂದು ಹೇಳಬಹುದು.

ಸಾಮಾಜಿಕ ಅಸಮಾನತೆಯ ಪಾತಳಿಯ ಮೇಲೆಯೇ ಪ್ರವಹಿಸುವ ಡಾ. ಕಾಶಿನಾಥ ಅಂಬಲಗೆಯವರ ಕಾವ್ಯ ಅದರ ಕೇಂದ್ರ ವಸ್ತುವಾಗಿ ಸಮಾಜವನ್ನೇ ಸ್ವೀಕರಿಸಿದುದರಲ್ಲಿ ಆಶ್ಚರ್ಯವಿಲ್ಲ ಸಾಮಾಜಿಕ ಅಸಮಾನತೆಯ ಒಂದು ಚಿತ್ರವನ್ನು ಹೀಗೆ ನೀಡುತ್ತಾರೆ.

> " ಸಮಾಜದ ಕುಂಡೀ ತಿಗದ ! ಮ್ಯಾಲ
> ಜಾತಿ ಕುರು ಆಗ್ಯಾದ
> ಸಾವಿರಾರು ವರ್ಷದ
> ಹಳಿಮಾತು
> ಮ್ಯಾಲ ಮ್ಯಾಲೇ
> ಮತಾಮ್
> ಮಾಡಿದವರು ! ಎಷ್ಟೋ ಜನ
> ಇನ್ನೂ ಕುರು ಒಡಿದಿಲ್ಲ
> ನಮಗ ನರಳೋದು ತಪ್ಪಿಲ್ಲ"[6]

ಬಂಡಾಯ ಸಾಹಿತ್ಯ ಚಳುವಳಿಯ ಪ್ರಣಾಳಿಕೆಯಲ್ಲಿ ಹೇಳಿರುವ ಮಾತುಗಳು ಜಿಲ್ಲೆಯ ಪ್ರಗತಿಪರ ಮನೋಧರ್ಮದ ಕವಿಗಳನ್ನು ಪ್ರಭಾವಿಸಲ್ಪಟ್ಟು ಚಳುವಳಿಯಲ್ಲಿ ತಾವು ಸಕ್ರಿಯವಾಗಿ

ಇಲ್ಲಿ ಬಂಡಾಯದ ಭಾಷೆ ಹಾಗೂ ಅದರ ಮೇಲ್ನೋಟದ ಆಕ್ರೋಶಕ್ಕೆ ಮೀರಿದ ಅರ್ಥವಂತಿಕೆಯನ್ನು ಪಡೆದಿದೆ. ಕಾವ್ಯ ಈ ಬಗೆಯ ಭಾವನೆಗೆ ಆಸ್ಪದ ಕೊಡುವಂತೆಯೇ ರಚನೆಯಾಗಿದೆ. ಡಾ. ಸಿದ್ಧಲಿಂಗಯ್ಯನವರು ತಮ್ಮ ಸಾವಿರಾರು ನದಿಗಳು ಹೊಲೆ ಮಾದಿಗರ ಹಾಡು, ಡಾ. ಅರವಿಂದ ಮಾಲಗತ್ತಿಯವರ ಮೂಕನಿಗೆ ಮಾತು ಬಂದಾಗ ಸಂಕಲನದ ಕವಿತೆಗಳೂ ಸಾವಿರಾರು ವರ್ಷಗಳಿಂದ ಧ್ವನಿಯಿರದ ಶೋಷಿತರ ಕೊರಳ ಧ್ವನಿಯಾಗಿ ಬಂದಂತೆ ಡಾ. ಅಂಬಲಗೆಯವರ ಕಾವ್ಯ ದಾಟಿಯೂ ಜಿಲ್ಲೆಯ ಅನೇಕ ಪ್ರಗತಿಪರ ನಿಲುವಿನಿಂದ ಬರೆಯ ತೊಡಗಿದ ಕವಿಗಳಿಗೆ ಒಂದು ಪ್ರೇರಣೆ, ಮಾದರಿಯಾದವು ಎನ್ನಬೇಕು.

ಹೊಸ ಶಕ್ತಿಯ ಕಸವನ್ನು ಹೀರಿಕೊಂಡ ಕವಿತೆಗಳು ಅನುಭವವನ್ನು ಕೆಲಮಟ್ಟಿಗಾದರೂ ಹೊಸಕ್ರಮದಲ್ಲಿ ಹೇಳಲು ಯತ್ನಿಸಿತು. ಜಿ.ಬಿ. ವಿಸಾಜಿಯವರಲ್ಲಿ ಮಾನವೀಯ ಹುಡುಕಾಟ ಕಾವ್ಯದ ಮುಖ್ಯ ತುಡಿತವಾಗಿ ಬಂದಿತು. ಹಸ್ತಾಕ್ಷರ ಎಂಬ ಕವಿತೆ ನಿಸರ್ಗ ಮತ್ತು ಮನುಷ್ಯನನ್ನು ಮುಖಾ ಮುಖಿಯಾಗಿಸಿ ಮನುಷ್ಯ ತನಗೆ ತಾನೇ ಒಂದು ನರಕವನ್ನು ಕಟ್ಟಿಕೊಳ್ಳುತ್ತಿರುವದನ್ನು ಧ್ವನಿಸುತ್ತದೆ. ಅಲ್ಲದೆ ಅವರ ಅಳಿಗಾಲ, ಉಳಿಗಾಲ 'ಬಾಳ ಸಂಗಾತಿ ಬದುಕಿಸೆನ್ನನು' ಕವಿತೆಗಳ ಜಗತ್ತು ಹೆಚ್ಚು ಪ್ರಾಮಾಣಿಕ ಮತ್ತು ತೀವ್ರವಾದ ಭಾಷೆಯಲ್ಲಿ ಅನಾವರಣಗೊಳ್ಳುತ್ತ ಹೋಗುತ್ತದೆ. ಬೀದರಿನ ಭಾಷೆಯನ್ನು ಹದವಾಗಿ ಬಳಸುವ ಡಾ. ಅಂಬುಲಗೆ, ದೇಶಾಂಶ ಹುಡಗಿ ಪ್ರಾದೇಶಿಕ ಭಾಷಾ ಸೊಗಡು, ಲಯಗಳನ್ನು ಚುಟುಕುಗಳಲ್ಲಿ ಪ್ರಯೋಗಿಸಿರುವರು. ಅದು ಕವಿಗಳ ಕಾವ್ಯದ ಸ್ವಪ್ರಜ್ಞೆತೆಯನ್ನು ಕಾಪಾಡಿದೆ.

ಬಂಡಾಯದ ಅಂಶಗಳನ್ನು ಚುಟುಕುಗಳಲ್ಲಿ ಮನೋಜ್ಞವಾಗಿ ಹಿಡಿದಿಡುವ ಮತ್ತೊಬ್ಬ ಕವಿಯೆಂದರೆ ಡಾ. ಬಿ.ಬಿ. ಪೂಜಾರಿ ಗಮನಾರ್ಹವಾಗಿದ್ದಾರೆ.

6. ಡಾ. ಕಾಶಿನಾಥ ಅಂಬಲಗೆ ಮುವತ್ತೈದು ಕವನಗಳು ಪು. 34 ಪ್ರಗತಿ ಪ್ರಕಾಶನ ಬಸವಕಲ್ಯಾಣ 1986 (ದ್ವಿ.ಮು)

ತನ್ನ ಮೂಲ ದ್ರವ್ಯವಾದ ವಿಡಂಬನೆ ವ್ಯಂಗವವನ್ನು ಕಿರಿದರಲ್ಲೇ ಹಿರಿದಾದ ಅರ್ಥದ ಪದರುಗಳನ್ನು ಚುಟುಕುಗಳಲ್ಲಿ ಸೃಷ್ಟಿಸಿಕೊಡುತ್ತಾರೆ. ಡಾ. ಪೂಜಾರಿಯವರ ಕಾವ್ಯ ಶೈಲಿಯನ್ನು ಕುರಿತು ಹಿರಿಯ ಕವಿ ಡಾ. ಸಾ. ಶಿ. ಮರುಳಯ್ಯನವರು ಪಡುವ ಅಭಿಪ್ರಾಯ ಹೀಗೆ" ಕಿರಿದರಲ್ಲೆ ಹಿರಿದಾದ ಅರ್ಥವನ್ನು ಗರ್ಭೀಕರಿಸಿಕೊಂಡು ತಾನೊಂದು ಚಿನ್ನದ ಚಾಟಿಯಾಗಿ ಪೆಟ್ಟುಕೊಟ್ಟು ಇಂದಿಗೂ ಪರಿಣಾಮಕಾರಿ ಅಭಿವ್ಯಕ್ತಿಯನ್ನು ಸಿದ್ದಿಸಿಕೊಂಡಿರುವುದರ ಸ್ಪಷ್ಟತೆಗಳನ್ನು ಇವರಲ್ಲಿ ಗುರುತಿಸಬಹುದು"[7] ಎಂದಿದ್ದಾರೆ.

ನಮ್ಮತನ ಕಳೆದುಕೊಂಡು ಅನಾಥ ಸ್ಥಿತಿಯನ್ನು ಅನುಭವಿಸುತ್ತಿರುವುದನ್ನು ಡಾ. ಪೂಜಾರಿಯರು ಕವಿತೆಯು ವಿಡಂಬನೆ ಮಾಡುವ ರೀತಿಯನ್ನು ಗಮನಿಸಬೇಕು.

" ಸಾವಿರ ಸಾವಿರ<br>
ಕೈಗಳಿಗೆ<br>
ತಟ್ಟೆಗಳನ್ನು ಕೊಟ್ಟು<br>
ಮೈಗಳಿಗೆ<br>
ಆಲಸ್ಯ ಕೊಟ್ಟು<br>
ಹರಪ್ಪಾದ ಕೊರಕಲಿನಲ್ಲಿ<br>
ನಮ್ಮನ್ನು ಹುಡುಕುವಲ್ಲಿ<br>
ಇಲ್ಲಿ<br>
ನಾವು ಕಳೆದು ಹೋಗಿದ್ದೇವೆ<br>
ಇಲ್ಲಿ<br>
ಕಳೆದುದನ್ನು ಅಲ್ಲಿ<br>
ಹುಡುಕುತಿದ್ದೇವೆ"[8]

ಶೋಷಕ ಮತ್ತು ಶೋಷಿತರಿಬ್ಬರ ಸಂಬಂಧವನ್ನು ಬಹುಮಾರ್ಮಿಕವಾಗಿ ಹೇಳುವ ಮುಖ್ಯ ಕವಿತೆಯಿದು ನೋವಿನಿಂದ ತುಂಬಿದ ಅನ್ಯಾಯಕ್ಕೊಳಗಾದವರ ಪರ ಧ್ವನಿ ಶೋಷಕರ ವಿರುದ್ಧದ ವ್ಯಂಗ್ಯದ ಪ್ರತಿಭಟನೆ ತುಂಬಿದೆ. ಇಡೀ ವ್ಯವಸ್ಥೆಯೇ ಹೇಗೆ ಉಳ್ಳವರ ಕೈಯಲ್ಲಿ ಸಿಕ್ಕು ನಲುಗಿ ಹೋಗಿದೆ ಎಂಬುವನ್ನು ತುಂಬ ಮಾರ್ಮಿಕವಾಗಿ ನುಡಿಯುತ್ತದೆ.

ಜಿಲ್ಲೆಯ ಎರಡನೇ ತಲೆಮಾರಿನ ಗಟ್ಟಿ ಭರವಸೆಯ ಕವಿಯತ್ರಿಯರಲ್ಲಿ ಡಾ. ಪ್ರೇಮಾ ಸಿರ್ಸೆ, ವಿಶಾಲಾಕ್ಷಿ ಕರಡಿ, ವಿಜಯಶ್ರೀ ಸಬರದ ಕೆ. ನೀಲಾ ಅತ್ಯಂತ ಪ್ರಮುಖರೆನಿಸುತ್ತಾರೆ.

---

7. ಡಾ. ಸಾ.ಶಿ. ಮರುಳಯ್ಯ ಮುನ್ನುಡಿ ಮೂರು ಬಣ್ಣ ನೂರು ಕವನ ಪುಟ-1 ವೀರೇಶ ಪ್ರಕಾಶನ ಹುಮನಾಬಾದ 1987.

8. ಡಾ. ಬಿ.ಬಿ. ಪೂಜಾರಿ. ಮೂರು ಬಣ್ಣ ನೂರು ಕವನ ಪು. 22 ವೀರೇಶ ಪ್ರಕಾಶನ ಹುಮನಾಬಾದ 1987.

ಡಾ. ಪ್ರೇಮಾ ಸಿರ್ಸೆ ಜಿಲ್ಲೆಯ ಗಮನಾರ್ಹ ಕವಯಿತ್ರಿಯಾಗಿದ್ದಾರೆ. ಬೀದರನ ಅಕ್ಕ ಮಹಾದೇವಿ ಮಹಿಳಾ ಪದವಿ ಮಹಾವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕಿ, ಪ್ರಾಚಾರ್ಯರಾಗಿದ್ದಾರೆ. ವಿದ್ಯಾರ್ಥಿ ಜೀವನದಲ್ಲಿಯೇ ಲೇಖನ, ಕವಿತೆಗಳನ್ನು ಬರೆದು ಬೇಗನೆ ಎಲ್ಲರ ಗಮನ ಸೆಳೆದು ಕವಯಿತ್ರಿಯೆನಿಸಿದರು. ಅವರು ಈವರೆಗೆ 'ಇದೂ ಒಂದು ಭಾರತ' 'ನೂರೊಂದು ನೆನಪು ಎದೆಯಾಳದಲ್ಲಿ', 'ಚುಕ್ಕೆಗಳು', 'ಹೊಸಬದುಕಿಗೆ' ಕವನ ಸಂಕಲನಗಳು ಕುವೆಂಪುರವರ ಭಾವಗೀತೆಗಳು ಹಾಗೂ ಲೇಖನಗಳು ಎಂಬ ವಿಮರ್ಶಾತ್ಮಕ ಕೃತಿಗಳನ್ನು ಈವರೆಗೂ ಪ್ರಕಟಿಸಿದ್ದಾರೆ. ಇವುಗಳಲ್ಲಿ "ನೂರೊಂದು ನೆನಪು ಎದೆಯಾಳದಲ್ಲಿ ಕೃತಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ರತ್ನಾಕರ ಮುದ್ದಣ ಅನಾಮಿಕ (1987) ಪ್ರಶಸ್ತಿ ಲಭಿಸಿರುತ್ತದೆ"[9] ಸ್ತ್ರೀಪಾದಿ ಬಂಡಾಯ ಚಳುವಳಿಯ ನಿಲುವುಗಳನ್ನು ಇವರ ಕವಿತೆಗಳ ಪ್ರಧಾನ ಗುಣಗಳಾಗಿವೆ.

" ನೊವಿನ ನೂರು ಶವಗಳು
ಮಲಗಿ ಭಣಗುಡುತ್ತಿರುವ
ಎದೆ ಮಸಣದಲಿ
ನಿರಾಶೆಯ
ರಣಹದ್ದುಗಳು
ಪಟ ಪಟನೆ
ರೆಕ್ಕೆ
ಬಡಿಯುತಿದೆ"[10]

ಕವಿಯಿತ್ರಿ ಮನದಲ್ಲಿ ಅದುಮಿಟ್ಟುಕೊಂಡು ಬಂದ ಬದುಕಿನ ನೋವು ವ್ಯಥೆ ಇಲ್ಲಿ ಕಾವ್ಯದ ಮೇಲುಕ ಹೊರಹಾಕುವರು. ನಿಜವಾದ ಹೋರಾಟದ ಬದುಕು ಸ್ತ್ರೀಯದ್ದಾಗಿದೆಯೆಂದ ಪ್ರತಿಪಾದಿಸುವ ಡಾ. ಸಿರ್ಸೆಯವರು ಸ್ತ್ರೀಯ ಹೋರಾಟದ ಸಂವೇದನೆಗಳನ್ನು ಕಾವ್ಯದಲ್ಲಿ ಪರಿಣಾಮಕಾರಿಗೊಳಿಸಿ ಗಮನಸೆಳೆದ ಕವಿಯಿತ್ರಿ.

ಡಾ. ವಿಜಯಶ್ರೀ ಸಬರದ ಈ ಜಿಲ್ಲೆಯ ಇನ್ನೋರ್ವ ಪ್ರಮುಖ ಕವಿಯಿತ್ರಿಯಾಗಿದ್ದಾರೆ. ಬೀದರ ಅಕ್ಕಮಹಾದೇವಿ ಕಾಲೇಜು ಗುಲಬರ್ಗಾ ವಿಶ್ವ ವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರವಾಚಕಿಯಾಗಿದ್ದ ಇವರು ಸಧ್ಯಕ್ಕೆ ಬಿಜಾಪುರದಲ್ಲಿನ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕಿಯಾಗಿರುವರು. ಕಾವ್ಯ ನಾಟಕ, ವಿಮರ್ಶೆ ಸಂಶೋಧನೆ ಕ್ಷೇತ್ರಗಳಲ್ಲಿ ಗಮನಾರ್ಹ ಸಾಧನೆ ಮಾಡಿರುವರು. ಆದರೂ ಡಾ. ವಿಜಯಶ್ರೀ ಸಬರದರನ್ನು ಪ್ರಮುಖವಾಗಿ ಕವಿಯಿತ್ರಿಯೇ ಗುರುತಿಸಲಾಗುತ್ತದೆ. ಅವರ ಕೃತಿಗಳಲ್ಲಿ ಲಕ್ಷ್ಮಣ ರೇಖೆ ದಾಟಿದವರು ಅತ್ಯಂತ ಮಹತ್ವದ ಕವನ ಸಂಕಲನವಾಗಿದೆ.

---

9. ಯಶೋದಮ್ಮ ಸಿದ್ದಬಟ್ಟೆ: ಬೀದರ ಜಿಲ್ಲೆಯ ಮಹಿಳಾ ಸಾಹಿತಿಗಳು ಪುಟ-16 ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು 2006.

"ಚಳುವಳಿ ಸಾಹಿತ್ಯ ಎರಡನ್ನೂ ಹತ್ತಿರದಿಂದ ಕಂಡುಕೊಂಡವರು ಅವುಗಳನ್ನು ಪ್ರಜ್ಞಾ ಪೂರ್ವಕವಾಗಿಯೇ ಬರೆಯಲು ಹೊರಟಂಥವರು"[11] ವಾಸ್ತವ ಪ್ರಜ್ಞೆಯೊಂದಿಗೆ ಮಹಿಳೆಯ ಸ್ಥಿತಿಗತಿಗಳನ್ನು ಕವಿತೆಗಳಲ್ಲಿ ಕಟ್ಟಿಕೊಟ್ಟಿರುವರು. ಅವರ ಲಕ್ಷಣ ರೇಖೆ ದಾಟಿದವರು. ಸ್ತ್ರೀ ತನದ ತುಡಿತವನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ಸ್ತ್ರೀಗೆ ದಕ್ಕಿರುವ ಸ್ಥಾನಮಾನವನ್ನು ಈ ವ್ಯವಸ್ಥೆಗೆ ಕಾರಣ.

ವಾದ ಸಂಪ್ರದಾಯಗಳನ್ನು ಕಟುವಾಗಿ ವಿಡಂಬಿಸಿ ಎಲ್ಲರ ಗಮನ ಸೆಳೆದ ಕವಿಯಿತ್ರಿ.

"ಅತ್ತೆ ಮಾವರಿಗಂಜಿ
ಮತ್ತೆ ಮೈದುನರಿಗಂಜಿ
ಬದುಕೆಂದು
ಬೋಧಿಸಲಾರೆ ತಂಗಿ"[12]

ಎಂದು ಸ್ತ್ರೀಯಲ್ಲಿ ಸ್ವತಂತ್ರವಾಗಿ, ಧೈರ್ಯವಾಗಿ ಸಮಸ್ಯೆಗಳನ್ನು ಎದುರಿಸುವಂಥ ಕೆಚ್ಚನ್ನು ತುಂಬುತ್ತಾರೆ. ಅವರ ಸ್ತ್ರೀವಾದದ ನೆಲೆಯ ಚಿಂತನೆ ಆದರ್ಶತನವು ಚುಟುಕುಗಳಲ್ಲಿ ಮಾರ್ಮಿಕವಾಗಿ ಮೂಡಿಬಂದಿವೆ. ಅಲ್ಲಿ ಬದುಕಿನ ವೈವಿಧ್ಯಮಯ ಮುಖಗಳನ್ನು ಅನಾವರಣ ಮಾಡಿರುವರು.

ಎಪ್ಪತ್ತರ ದಶಕದಲ್ಲಿ ಕನ್ನಡದಲ್ಲಿ ಕಾಣಿಸಿಕೊಂಡ ನವೋತ್ತರ ಸಾಹಿತ್ಯ ಚಳುವಳಿ ಅನೇಕ ಸಂವೇದನೆಗಳ ಅಭಿವ್ಯಕ್ತಿಗೆ ಕಾಣವೋ ಆಯಿತೆಂಬುದನ್ನು ಈಗಾಗಲೇ ತಿಳಿದುಕೊಂಡಿದ್ದೇವೆ ದಲಿತ-ಬಂಡಾಯ ಮುಸ್ಲಿಂ ಸಂವೇದನೆ, ದೇಶಿ ಸಂವೇದನೆ, ಸ್ತ್ರೀ ಸಂವೇದನೆಗಳು, ಅತ್ಯಂತ ಪ್ರಮುಖವಾಗಿವ ಈ ಸಂವೇದನೆಗಳಿಗೆ ಸ್ಪಂದಿಸಿದ ಅನೇಕ ಪ್ರತಿಭೆಗಳು ಎಂಬತ್ತರ ದಶಕದೀಚೆಗೆ ಜಿಲ್ಲೆಯಲ್ಲಿ ಕಾಣಿಸಿಕೊಂಡವು. ಕೆ. ನೀಲಾ ಚನ್ನಮ್ಮ ವಲ್ಲೇಪುರೆ, ವಜ್ರಾ ಪಾಟೀಲ, ಸೂರ್ಯಕಾಂತ ನಿನ್ನೇಕರ ಮುಂತಾದವು ಪ್ರಮುಖವಾಗಿ ಕೇಳಿ ಬರುವ ಹೆಸರುಗಳಾಗಿವೆ. ದಲಿತ ಸಂವೇದನೆಯಿಂದ ಬರೆಯುವವರಲ್ಲಿ ಡಾ. ಮಲ್ಲಿಕಾರ್ಜುನ ಅವೆಲ್ಲ ಡಾ. ಜಯದೇವಿ ಗಾಯಕವಾಡ ಕವಿತಾ ಮಲ್ಲಪ್ಪ ಮೊದಲಾದವರನ್ನು ಹೆಸರಿಸಬಹುದು ಅಸಮಾನತೆಯ ವಿರುದ್ಧ ದಂಗೆಯೆದ್ದ ಇಂಥ ಪ್ರಸಂಗದಲ್ಲಿಯೇ ಈ ಕವಿಗಳು ದಲಿತ ಬಂಡಾಯದ ಆಶಯಗಳನ್ನು ತಮ್ಮ ಕಾವ್ಯ ಕ್ರಿಯೆಗೆ ಎತ್ತಿಕೊಳ್ಳುವ ಕುತೂಹಲ ತೋರುತ್ತಾರೆ.

---

10. ಪ್ರೇಮಾ ಸಿರ್ಸೆ: ಚುಕ್ಕೆಗಳು ಪು. 63., ಆನಂದ ಪ್ರಕಾಶನ ಬೀದರ
11. ಜಯದೇವಿ ಎಂ. ಗಾಯಕವಾಡ ಬೀದರ ಜಿಲ್ಲಾ ದರ್ಶನ ಪು. 52 (ಸಂ) ಡಾ. ಸೋಮನಾಥ ಯಾಳವಾರ, ಡಾ. ಪ್ರೇಮಾ ಸಿರ್ಸೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ. 2005.
12. ಡಾ. ವಿಜಯಶ್ರೀ ಸಬರದ : ಲಕ್ಷ್ಮಣ ರೇಖೆ ದಾಟಿದವರು ಪು. 18 ಪಲ್ಲವಿ ಪ್ರಕಾಶನ, ಬೀದರ 1995

### 3.4. ಮೂರನೇ ಘಟ್ಟದ ಕವಿಗಳು

ಜಿಲ್ಲೆಯ ಮೂರನೇ ತಲೆಮಾರಿನ ಕವಿಗಳಿಂದ ಅನೇಕ ವೈವಿಧ್ಯಮಯ ಸಂವೇದನೆಗಳ ಬರ್ಪೂರ ಬೆಳೆ ಬಂದಿರುವುದನ್ನು ಕಾಣುತ್ತೇವೆ. ಇಲ್ಲಿ ಕಿರಿಯರೊಂದಿಗೆ ಹಿರಿಯ ತಲೆಮಾರಿನ ಕವಿಗಳೂ ಬದಲಾದ ಕಾಲ ಪರಸ್ಥಿತಿಯ ವಿಷಯಗಳನ್ನು ಕಾವ್ಯಕ್ಕೆ ವಸ್ತುವಾಗಿಸಿ ವಿಶಿಷ್ಟ ಅಭಿವ್ಯಕ್ತಿ ನೀಡಿ ಜಿಲ್ಲೆಯ ಕಾವ್ಯ ಅದರಲ್ಲೂ ಚುಟುಕ ಕಾವ್ಯವನ್ನು ಸಮೃದ್ಧಗೊಳಿಸಿರುವರು. ಮೂರನೇ ತಲೆಮಾರಿನವರಲ್ಲಿ ಮ.ಮಾ. ಬೋರಾಳಕರ ಚುನ್ನೂಲಾಲ ಶಿವುಕುಮಾರ ಕಟ್ಟೆ, ಬಿ.ಎಸ್. ಸೋಲಾಪುರೆ, ಓಂ ಪ್ರಕಾಶ ದಡ್ಡೆ, ವಿಕ್ರಮ ವಿಸಾಜಿ, ಸೂರ್ಯಕಾಂತ ವಿ. ನಿನ್ನೇಕರ, ವೀರಣ್ಣಾ ವಿ.ಕೆ. , ಎಂ.ಜಿ. ದೇಶಪಾಂಡೆ, ಹಂಶಕವಿ, ಮಂಗಲಾ ವಿ. ಕಪರೆ, ಸುನಿತಾ ಬಿರಾದಾರ, ವಿನೂತಾ ಅಯ್ಯಂಗಾರ, ಡಾ. ಮಲ್ಲಿಕಾರ್ಜುನ ಆಮ್ಲೆ, ಡಾ. ಗುರುಲಿಂಗಪ್ಪ, ದವಾಲೆ, ಶಿವರಾಜ ಪಾಟೀಲ, ಶ್ವೇತಾರಾಣಿ ದೇಶಮುಖ, ರೇವಪ್ಪ ಬಿ. ವಾಂಜರಖೇಡ, ಎಂ.ಜಿ. ಗಂಗನಪಳ್ಳಿ, ನಾಗಮೂರ್ತಿ ಪಂಚಾಳ, ಬಾಬುರಾವ ಗಾದಗಿ, ಡಾ. ಬಸವರಾಜ ಬಲ್ಲೂರ, ಡಾ. ಜಗನ್ನಾಥ ಹೆಬ್ಬಾಳೆ, ಸುವರ್ಣ ಮಾಲಾ ದೀಕ್ಷಿತ್, ಎಂ. ಆರ್. ಶ್ರೀಕಾಂತ, ಶಿರೋಮಣಿ ತಾರೆ, ಪ್ರೊ. ಸೂಗಯ್ಯ ಹಿರೇಮಠ ನಾಗಶೆಟ್ಟಿ ಪಾಟೀಲ, ಡಾ. ಸೋಮನಾಥ ಯಾಳವಾರ, ಡಾ. ವಿಶಾಲಾಕ್ಷಿ ಕರಡ್ಡಿ, ಡಾ. ಮಾಣಿಕರಾವ ಧನಶ್ರೀ, ರಶ್ಮಿ ವಸ್ತ್ರದ, ಭಾರತಿ ವಸ್ತ್ರದ ಮಲ್ಲಮ್ಮ, ಆರ್. ಪಾಟೀಲ, ಕಲಾವತಿ ಬಿರಾದಾರ, ಇಂದುಮತಿ ಬಂಡಿ, ಅರುಂಧತಿ ಚಾಂದಕವಟೆ, ಡಾ. ಶಾಂತಾ ಅಷ್ಟಗಿ, ಕಾವ್ಯ ಶ್ರೀ ಮಹಾಗಾಂವಕರ ಲೀಲಾ ಪಾಟೀಲ ಮುಂತಾದವರು ಚುಟುಕು ಕವಿತೆಗಳನ್ನು ರಚಿಸಿ ಆ ಸಾಹಿತ್ಯದ ಶ್ರೀಮಂತಿಕೆಗೆ ಕಾರಣರಾಗಿದ್ದಾರೆ.

ಬಹುತೇಕ ಈ ಘಟ್ಟವು ಅತ್ಯಂತ ಸಂಕೀರ್ಣವಾಗಿದೆ. ಏಕೆಂದರೆ ಈ ಹಂತದಲ್ಲಿ ಮೊದಲ ಹಾಗೂ ಎರಡನೇ ತಲೆಮಾರಿನ ಕವಿಗಳೂ ಸೇರಿರುವರು. ಮಾತ್ರವಲ್ಲದೆ, ಇಲ್ಲಿನ ರಚನೆಗಳಲ್ಲಿ ನವೋದಯ, ಪ್ರಗತಿಶೀಲ, ನವ್ಯ ನವ್ಯೋತ್ತರ ಹಾಗೂ ಬಂಡಾಯೋತ್ತರ ಚಳುವಳಿಗಳ ಕಾವ್ಯ ಕಾಳಜಿಗಳೂ ಸೇರಿವೆ. ಪ್ರಕೃತಿ ಪ್ರೀತಿ–ಪ್ರೇಮ, ಪ್ರಣಯ ಸಾಮಾಜಿಕ ಸಮಸ್ಯೆಗಳಿಂದ ಜಾತಿ, ವರ್ಗ ಲಿಂಗ ತಾರತಮ್ಯ ರಾಜಕೀಯ, ಧಾರ್ಮಿಕ ಮುಂದಾಳುಗಳ ಮುಖವಾಡಗಳನ್ನು ತೆರೆದು ಬಯಲುಗೊಳಿಸುವ ಜಾಗತೀಕರಣದ ದುಷ್ಪರಿಣಾಮ, ನೀತಿ, ಮೌಲ್ಯಾ ತತ್ವ ಸಿದ್ಧಾಂತ ವಿವಿಧ ಕ್ಷೇತ್ರಗಳ ವ್ಯಕ್ತಿ ಚಿತ್ರಗಳು ಎಲ್ಲವುಗಳ ಅಭಿವ್ಯಕ್ತಿಯನ್ನು ಈ ಘಟದಲ್ಲಿ ಬರೆಯುವವರಲ್ಲಿ ಮುಖ್ಯವಾಗಿ ಕಾಣುತ್ತೇವೆ.

ಬದಲಾದ ಕಾಲದ ಪರಿಸ್ಥಿತಿಗಳನ್ನು ಅರ್ಥೈಸಿಕೊಂಡು ಬರೆಯುವ ಜಿಲ್ಲೆಯ ಕವಿಗಳ ಕಾವ್ಯಗಳನ್ನು ಗಮನಿಸಿದರೆ ಅವರ ಕಾವ್ಯದ ಗ್ರಹಿಕೆಯ ವಿಸ್ತಾರದ ಅರಿವಾಗುತ್ತದೆ. ಡಾ. ಮಲ್ಲಿಕಾರ್ಜುನ ಆಮ್ಲೆ ಅವರ ಕವಿತೆಯಲ್ಲಿ ಪರಿಸ್ಥಿತಿಯ ಚಿತ್ರ ಹೀಗಿದೆ.

ಉದಾ : 1) "ಪಕ್ಷ-ಪಕ್ಷಾಂತರ ಒಡಕು
ಮತ್ತೆ ವಿಲೀನ
ಇದರಿಂದ ಆಗಿದೆ
ನಮ್ಮ ರಾಜಕೀಯ ಕೊಳೆತು ಮಲೀನ"[13]

ಅದೇ ರೀತಿ ಸ್ವಾತಂತ್ರ್ಯೋತ್ತರ ಭಾರತದ ಪರಿಸ್ಥಿತಿಗೆ ಕನ್ನಡಿ ಹಿಡಿಯುವ ಹಂಶಕವಿ ಅವರ ಗಾಂಧಿ ಕವಿತೆ ಹೀಗಿದೆ.

"[illegible]
ನಡೆಯಿತ್ತು
ಸ್ವಾತಂತ್ರ್ಯಕ್ಕಾಗಿ ಹೋರಾಟ
ಆ ಮೇಲೆ ಶುರುವಾಯ್ತು
ನಾಯಿ ಹಂದಿ
ನರಿಗಳ ಕಿರುಚಾಟ
ಯಾರೂ ಕೇಳುವರಿಲ್ಲ ಈಗ
ಅವರವರದೆ ಅರ್ಭಟ"[14]

ಸಾಹಿತ್ಯಿಕ ಸಂದರ್ಭದಲ್ಲಿ ಕವಿಯ ಈ ಸಾಲುಗಳು ಅತ್ಯಂತ ಮಹತ್ವವೆನಿಸುತ್ತವೆ. ಕವಿಯಾದವನು ಅನುಭವಕ್ಕೆ ನಿಷ್ಠನಾಗಿ, ಪ್ರಾಮಾಣಿಕ ತಿಳುವಳಿಕೆಯಿಂದ ಬರೆಯಬೇಕೆನ್ನುವುದು ಸರಳವಾಗುದುದಲ್ಲ. ಆದರೆ ಅಂಥ ಅನುಭವಗಳ, ಘಟನೆಗಳ ಮರೆಯಲ್ಲಿರುವ ನಿಜಗಳನ್ನು ಶೋಧಿಸುವುದು ತುಂಬ ಕಷ್ಟ ಸಾಧ್ಯ. ಸಾಂಸ್ಕೃತಿಕ ಸಾಹಿತ್ಯಿಕ ವಲಯಗಳನೆಲ್ಲ ರೂಪಿಸುವುದು ನಿಯಂತ್ರಿಸುವುದು ಇಡೀ ಸಮಾಜ ಮತ್ತು ಅದು ರೂಡಿಸಿಕೊಂಡು ಬಂದ ನಂಬಿಕೆಗಳೇ ಆದ್ದರಿಂದ ಕಾವ್ಯವಾಗಲಿ, ಕವಿಗಯಾಗಲಿ ಈ ಎಲ್ಲ ಸ್ಥಿತ್ಯಂತರಗಳಿಂದ ದೂರ ನಿಂತು ಮಾತನಾಡುವ ಹಾಗಿಲ್ಲ. ಅವುಗಳೊಳಗಿನ ಹುಳುಕುಗಳನ್ನು ನಯವಾಗಿ ವಂಚಿಸುವ ಜಾಗೃತ ಹಿಂಸೆಗಳನ್ನು ಕಂಡು ಅದಕ್ಕೆ ಪ್ರತಿಕ್ರಿಯಿಸುವುದು ಸಾಮಾಜಿಕ ಜವಾಬ್ದಾರಿಯ ಕರ್ತವ್ಯವೂ ಆಗಿರುತ್ತವೆ. ಈ ಎಚ್ಚರದಲ್ಲಿ ಸ್ವತಂತ್ರ್ಯದ ಪಲ್ಲಟ, ಮೌಲ್ಯ ಪ್ರತಿಪಾದನೆ ಜನಾಭಿಮುಖ ಕಾಳಜಿಗಳನ್ನು ಧ್ಯೇನಿಸಿಕೊಂಡ ಸತ್ಯಗಳಾಗಿ ತೋರಿವೆ. ವಜ್ರಾ ಪಾಟೀಲರ ಕವಿತೆಯಲ್ಲಿ ಈ ಎಚ್ಚರ ಮೂಡಿ ಬಂದಿರುವುದು ಹೀಗಿದೆ.

"ಮೆಟ್ಟಿ ನಿಂತು
ಹಳೆ ಕಸ
ಕಿತ್ತು ಬೆಳೆ
ಬೆಳೆಯ ಬೇಕಾಗಿದೆ"[15]

---

13. ಡಾ. ಮಲ್ಲಿಕಾರ್ಜುನ ಆಮ್ಮೆ ನಾನು-ನೀನು ಪು. 23 ನವಕ್ರಾಂತಿ ಪ್ರಕಾಶನ ಸೋನಕೇರಾ 2006.
14. ಹಂಶಕವಿ ಬದುಕು ಪು. 72 ಧರಿನಾಡು ಕನ್ನಡ ಸಂಘ ಬೀದರ 2007.

ಚಳುವಳಿ ಪ್ರತಿಭಟನಾ ಧ್ವನಿಗಳ ಪ್ರಭಾವ, ಸಾಂಸ್ಕೃತಿಕ ಪರಿಸರದಲ್ಲಾದ ಪರಿವರ್ತನೆ ಕವಿಯ ಕಾವ್ಯದ ಮೇಲೆ ಪರಿಣಾಮ ಬೀರಿದ್ದನ್ನು ಇಲ್ಲಿ ಸ್ಪಷ್ಟವಾಗುತ್ತದೆ. ತೀವ್ರವಾದ ಸಾಮಾಜಿಕ ಸಂವೇದನೆಯಿಂದ ಕವಿತೆ ಮೂಡಿ ಬಂದಿದೆ.

ಕವಿತೆಗಳು ಪ್ರತಿಪಾದಿಸುವ ಸ್ವಾತಂತ್ರ್ಯ, ಸಮಾನತೆ ಮಾನವೀಯ ನ್ಯಾಯ ಇಂಥ ಮೌಲ್ಯಗಳು ಆಶಯಗಳು ಅತ್ಯಂತ ಬೆಲೆಯುಳ್ಳವು. ಮಾನವೀಯತೆ ಘನತೆಯನ್ನು ತಂದುಕೊಡುವಂತಹವು. ಮೌಲ್ಯಾದರ್ಶವಿಲ್ಲದ ಮಾನವನ ಬದುಕು ದೊಡ್ಡದಾಗುವುದಿಲ್ಲ. ಎಂಬುದು ನಿಜ ಆದರೆ ಮೌಲ್ಯಕ್ಕಾಗಿ ಮೌಲ್ಯ ಇರಬೇಕಾದುದಿಲ್ಲ. ಅದು ಮನುಷ್ಯನಿಗಾಗಿ ಇರಬೇಕಾದುದು. ಅಂದರೆ ಮೌಲ್ಯಾದರ್ಶಗಳ ಕೇಂದ್ರ ಲಕ್ಷ್ಯ ಮನುಷ್ಯನಾಗಿರಬೇಕೆ ಹೊರತು ಮೌಲ್ಯಾವಲ್ಲ ಎಂಬ ಅರಿವು ಅತ್ಯಗತ್ಯವಾಗುತ್ತದೆ. . ವಿಚಿತ್ರವೆಂದರೆ ನಮ್ಮ ಜಾತಿ ವ್ಯವಸ್ಥೆಯಲ್ಲಿ ಮತ ವರ್ಗಗಳಲ್ಲಿ ಮನುಷ್ಯನೇ ಕಳೆದು ಹೋಗಿದ್ದಾನೆ. 60 ಕಳೆದು ಹೋದ ಮನುಷ್ಯನನ್ನು ಕವಿ ಮನಸ್ಸು ಎಚ್ಚತ್ತು ಹುಡುಕಾಟಕ್ಕೆ ತೊಡಗಿಸಿಕೊಂಡದ್ದನ್ನು ಈಗಿನ ಹೊಸ ತಲೆಮಾರಿನ ಕವಿಗಳಲ್ಲಿ ಪ್ರಧಾನವಾಗಿ ಕಾಣಲಾಗುತ್ತದೆ.

ಮನುಷ್ಯನನ್ನು ಮನುಷ್ಯನನ್ನಾಗಿಯೇ ಕಾಣಬೇಕೆಂಬ ಒತ್ತಾಸೆಯನ್ನು ಹೊತ್ತ ಹೊಸ ತಲೆಮಾರಿನ ಕವಿಗಳು ಮಾನವೀತೆಯ ಆರಾಧಕರಾಗಿ ಸಾಂಸ್ಕೃತಿಕ ಚಿತ್ರಣಕ್ಕೆ ಹೊಸ ತಿರುವು ಮೂಡಿಸುವಲ್ಲಿ ಪ್ರಮುಖ ಪಾತ್ರ ವಹಿಸಿರುವುದು ನಮ್ಮ ಚಾರಿತ್ರ್ಯದ ಸನ್ನಿವೇಶಗಳಲ್ಲಿಯೇ ಅಪೂರ್ವವಾದುದು.

"ಎಪ್ಪತ್ತರ ದಶಕದಲ್ಲಿ ದಲಿತ ಸಂವೇದನೆಗಳು ಪ್ರಕಟವಾಗುವ ಮೂಲಕ ಕನ್ನಡ ಕಾವ್ಯದಲ್ಲಿ ಸಾಮಾಜಿಕ ಬದುಕಿನಲ್ಲಿ ಹೊಸ ಅಧ್ಯಾಯವೇ ನಿರ್ಮಾಣವಾಯಿತೆನ್ನಬೇಕು"[16] ಈ ಹೊಸ ಅಧ್ಯಾಯಕ್ಕೆ ಬೀದರ ಜಿಲ್ಲೆಯ ಕವಿಗಳೂ ತಮ್ಮ ವಿಶಿಷ್ಟ ಅಭವ್ಯಕ್ತಿಯ ಪುಟಗಳನ್ನು ಸೇರಿಸಿದರೆನ್ನಲೇಬೇಕಾಗುತ್ತದೆ.

---

15. ವಜ್ರಾ ಪಾಟೀಲ ಮನದಾಳ ಪು. 32 ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಸಂಘ ಬೀದರ 1999.

16. ಡಾ. ಗುಂಡಣ್ಣ ಚ. ಕಲಬುರ್ಗಿ ಕಣವಿ ಮತ್ತು ಆಧುನಿಕ ಕಾವ್ಯ ಪರಂಪರೆ ಪು. 268 ಸೌಜನ್ಯ ಪ್ರಕಾಶನ ಮೂಡಲಗಿ 2000.

ತಮ್ಮ ಕವಿತೆಗಳಲ್ಲಿ ವಿಶಿಷ್ಟ ದಲಿತ ಸಂವೇದನೆ ನೀಡುವ ಮೂಲಕ ಗಮನ ಸೆಳೆದ ಕವಿ ಮಲ್ಲಿಕಾರ್ಜುನ ಆವೆಲ್ಲ ಅವರು ನೆಲದಲ್ಲಿ ತಲ ತಲಾಂತರಗಳಿಂದ ನಡೆಯುತ್ತಿರುವ ದಲಿತರ ಮೇಲಿನ ದೌರ್ಜನ್ಯ ಶೋಷಣೆಗಳು ಅಸಮಾನತೆಯ ಬೀಜಗಳು ಬಿತ್ತಿ ಸ್ವಾರ್ಥ ಸಾಧಿಸುವ ಹುನ್ನಾರಗಳನ್ನು "ಈ ನೆಲದ ಗುಣ" ಕವಿತೆಯಲ್ಲಿ ಓೀಗೆ ಬಿಡಿಸುತ್ತಾರೆ.

"ಈ ನೆಲದ ಮಣ್ಣಿನಲ್ಲಿ
ಬುದ್ಧ ಬಸವ ಅಂಬೇಡ್ಕರರು
ಬುಡಮೂಟಿ ಬಿತ್ತಿದ್ದರೂ
ಕುಡಿಯೊಡೆದು ಚಿಗುರಲಿಲ್ಲ
ಸಮತೆಯ ಹೂ ಬಳ್ಳಿ
ಆದರೆ.
ಎಲ್ಲಿ ಬೀಸಾಡಿದರಲ್ಲಿ
ಫಲವತ್ತಾಗಿ ಬೆಳೆಯುತ್ತವೆ
ಜಾತಿ–ಧರ್ಮದ
ಪಾಪಸಕಳ್ಳಿ" [17]

ಸಾಮಾಜಿಕ ಕಳಕಳಿಯ ಮೂಲಕ ತರುಣ ಕವಿಗಳು ವ್ಯಕ್ತಪಡಿಸುವ ಪ್ರತಿಭಟನೆ ಸಮಾನತೆಯನ್ನು ಬಯಸುವ ಇಚ್ಛೆ ಆಶಾವಾದ ಅನ್ಯಾಯಕ್ಕೊಳಗಾದವರ ಬದುಕಿನ ನೋವು ಸಂಕಷ್ಟಗಳನ್ನು ಉಳಿದವರೂ ಅರಿಯುವಂತೆ ಮಾಡುವುದು ಮೆಚ್ಚಿಗೆ ತರುತ್ತದೆ.

ಸಾಮಾಜ ಕತೆಗೆ ಸ್ಪಂದಿಸಿದಂತೆ ಜಿಲ್ಲೆಯ ಕವಿಗಳಲ್ಲಿ ಪ್ರಕೃತಿ ಕಾಳಜಿ ಮಾನವ ಪ್ರೀತಿ ಪ್ರೇಮಗಳ ಬಗೆಗೂ ತೀವ್ರವಾದ ಅಭಿವ್ಯಕ್ತಿ ನೀಡಿರುವುದು ಜಿಲ್ಲೆಯ ಚುಟುಕು ಸಾಹಿತ್ಯದ ವಸ್ತು, ವಿಚಾರ, ದೃಷ್ಟಿಯ ಶ್ರೀಮಂತಿಕೆಗೆ ಹಿಡಿದ ಕನ್ನಡಿಯಾಗಿದೆ.

**17. ಡಾ. ಮಲ್ಲಿಕಾರ್ಜುನ ಆವ್ಲೆ ನಾನು ನೀನು ಪು. 14 ನವಕಾಂತಿ ಪ್ರಕಾಶನ ಸೋನಕೇರಿ ಹುಮನಾಬಾದ 2006.**

# ಅಧ್ಯಾಯ – 4 ಚುಟುಕುಗಳ ಬಹುಮುಖಿ ನೆಲೆಯ ಅಧ್ಯಯನ.

4.1 ಪೀಠಿಕೆ

4.2 ರೂಪ ಗುಣಲಕ್ಷಣಗಳು

4.3 ಪ್ರಕೃತಿ ಚಿತ್ರಣ

4.4 ಸಾಮಾಜಿಕ ಚಿತ್ರಣ

4.5 ಪ್ರೀತಿ–ಪ್ರೇಮ–ಚಿತ್ರಣ

4.6 ಭಾಷೆ–ಶೈಲಿ–ಛಂದಸ್ಸು ಇತ್ಯಾದಿ

# ಅಧ್ಯಾಯ – 4

# ಚುಟುಕುಗಳ ಬಹುಮುಖಿ ನೆಲೆಯ ಅಧ್ಯಯನ

## 4.1 ಪೀಠಿಕೆ :

ಹೊಸಗನ್ನಡದ ಇತರ ಸಾಹಿತ್ಯ ರೂಪಗಳಲ್ಲಿ ಚುಟುಕು ಸಾಹಿತ್ಯವೂ ಒಂದು ವಿಶಿಷ್ಟ ಪ್ರಕಾರವಾಗಿದೆ. ಅದು ನವೋದಯ ಕಾವ್ಯದೊಡನೆ ಕನ್ನಡದಲ್ಲಿ ಮೈದಳೆದಿದ್ದರೂ ಕಳೆದ ಸುಮಾರು ಮೂರು ದಶಕಗಳಲ್ಲಿ ಹುಲುಸಾಗಿ ಬೆಳೆದಿದೆ. ಚುಟುಕುಗಳ ಇಂಗ್ಲೀಷ ಸಾಹಿತ್ಯದಿಂದ ಕನ್ನಡಕ್ಕೆ ಬಂದಿದೆ. ಕನ್ನಡದಲ್ಲಿ ಚುಟುಕುಗಳು ಹನಿ ಕವಿತೆ, ಹನಿಗವನ, ಕಿರುಗವನ, ಬಿಡಿನುಡಿ, ಹದಿರು ನುಡಿ, ಚೌಟುನುಡಿ, ಹಾಯ್ಕು"[1] ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ.

ಚುಟುಕು ಎಂದರೆ ಅದರ ಹೆಸರೇ ಸೂಚಿಸುವಂತೆ ಕೆಲವೇ ಸಾಲುಗಳಲ್ಲಿ ಕವಿ ಆಶಯವನ್ನು ವ್ಯಕ್ತಪಡಿಸುವ ಸಣ್ಣ ಪ್ರಮಾಣದ ಪದ್ಯ ಅಥವಾ ಕವಿತೆಯಾಗಿದೆ. ಚುಟುಕುಗಳು ಚಿಕ್ಕ ಚಿಕ್ಕ ಪದ ಗುಚ್ಛ, ಸಾಲುಗಳಲ್ಲಿ ಅಂದರೆ ಎರಡು, ಮೂರು, ನಾಲ್ಕು ಹೆಚ್ಚೆಂದರೆ ಏಳು ಇಲ್ಲವೆ ಎಂಟು ಸಾಲುಗಳಲ್ಲಿ ರಚನೆಯಾಗಿರುವವು, ಪ್ರಾಸಲಯ, ಮುಕ್ತ ಛಂದೋ ಬದ್ಧತೆ ಚುಟುಕು ಕವಿತೆಗಳ ಲಕ್ಷಣಗಳಾಗಿ ಗುರುತಿಸಬಹುದು. ಚುಟುಕುಗಳು ವಿನೋದ, ವ್ಯಂಗ ಪ್ರೀತಿ, ಪ್ರೇಮ, ಕೌಟುಂಬಿಕ, ಸಾಮಾಜಿಕ, ನೈತಿಕ ಸಾಂಸ್ಕೃತಿಕ ಸ್ಥಿತಿಗತಿಗಳನ್ನು ತಿಳಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಚುಟುಕುಗಳನ್ನು ಕುರಿತು ಅನೇಕ ವಿದ್ವಾಂಸರು ತಮ್ಮದೇ ಆದ ವಿಚಾರಗಳಲ್ಲಿ ಅದರ ರೂಪ, ಗುಣಲಕ್ಷಣ, ಮುಂತಾದವುಗಳನ್ನು ಕುರಿತು ಅಭಿಪ್ರಾಯ ನೀಡಿರುವರು.

## 4.2. ರೂಪ, ಗುಣಲಕ್ಷಣಗಳು

ಚುಟುಕು ಆಕಾರದಲ್ಲಿ ಕಿರಿದಾದ ಪದ್ಯ ಬಂಧವಾಗಿದೆ. ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ರೂಪಕ ಪ್ರತಿಮೆ, ಸಂಕೇತಗಳು ಧ್ವನಿ ಶಕ್ತಿಯನ್ನು ಹಿಡಿದಿಟ್ಟು ಅರ್ಥ ಸ್ಫೋಟಗೊಳಿಸಿ ಓದುಗರಲ್ಲಿ ತೀವ್ರವಾದ ಪರಿಣಾಮವನ್ನುಂಟು ಮಾಡುವುದು ಅದರ ಹಿರಿಯ ಗುಣವಾಗಿದೆ.

---

1. ಕನ್ನಡ ಚುಟುಕು ಸಾಹಿತ್ಯ : ಸಿ.ಪಿ. ಕೊಟ್ರೇಶ ಪು. 3 ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ. 2007.

ವಿ.ಗ. ನಾಯಕ ಅವರು ನವ್ಯದ ಸಂಕೀರ್ಣತೆ ಮತ್ತು ಉಪೇಕ್ಷೆ ಬಂಡಾಯದ ಪೆಟ್ಟು, ದಲಿತರ ಸಿಟ್ಟು, ಅನೇಕ ಬಗೆಯ ವಿಷಯ ವಸ್ತುಗಳನ್ನೊಳಗೊಂಡ ಚುಟುಕಗಳಲ್ಲಿ ಅನೇಕರು ಅಭಿವ್ಯಕ್ತಿಸಿದ್ದಾರೆ"[2]

ರಾಷ್ಟ್ರಕವಿ ಕುವೆಂಪು ಅವರು ಚುಟುಕುಗಳಿಗೆ ಕಿಡಿಗವನಗಳು ಎಂದಿದ್ದರೆ, ಸುಮತೀಂದ್ರ ನಾಡಿಗರು ಪುಟ ಬರ್ತಿ ಕಾವ್ಯವೆಂದರು. ಚುಟುಕಗಳು ಕನ್ನಡಿ ಇದ್ದ ಹಾಗೆ ಪುಟ್ಟ ಕನ್ನಡಿಯಲ್ಲಿ ಇಡೀ ಆಕಾಶವನ್ನೇ ಹೇಗೆ ತೋರಿಸಲು ಸಾಧ್ಯವೋ ಹಾಗೆಯೇ ಪುಟ್ಟ ಗಾತ್ರದ ಚುಟುಕುಗಳಲ್ಲಿ ಹಿರಿದಾದ ಅರ್ಥ ಶಕ್ತಿಯನ್ನು ಕಾಣಿಸಲು ಸಾಧ್ಯವಿದೆ.

ತಿ.ನಂ. ಶ್ರೀ ಅವರು ಚುಟುಕುಗಳನ್ನು 'ಮುಕ್ತಕಗಳು' ಎಂದು ಕರೆದಿದ್ದಾರೆ. "ಪರಾವಂಬವಿಲ್ಲದ ಸತ್ವಪೂರ್ಣವಾದ ಸ್ವಚ್ಛಂದ ಪ್ರವೃತ್ತಿಯ ಸ್ವಪ್ರತಿಷ್ಠೆಯ ಸ್ವಯಂ ವಿರಾಜಮಾನವಾದ ರಚನೆಯೇ ಚುಟುಕು"[3] ಎಂದು ಕರೆದಿದ್ದಾರೆ.

ಅದೊಂದು ಅಣುಗಬ್ಬ ಕಿರಿದರಲ್ಲಿ ಹಿರಿದರ್ಥವನ್ನು ತುಂಬಿಕೊಂಡಿರುವ ಅಕ್ಷಯ ಪಾತ್ರೆಯದು"ಅಂತರಂಗದ ಆಕಾಶದಲ್ಲಿ ಕ್ಷಣ ಮಾತ್ರದಲ್ಲಿ ಮಿಂಚುವ ಹೊಳಪು. ಅದೊಂದು ಹನಿಯಾದರೂ ಸಮಗ್ರ ಅಥವಾ ಪರಿಪೂರ್ಣ ಚಿತ್ರವನ್ನು ಕಟ್ಟಿಕೊಡುವುದು"[4] ಎಂದು ಎಚ್ಚ. ಎಸ್.ಕೆ.ಯವರು ಚುಟುಕು ಸಾಹಿತ್ಯದ ಬಗೆಗೆ ಅದರ ಲಕ್ಷಣದ ಬಗೆಗೆ ಅಭಿಪ್ರಾಯಪಟ್ಟಿರುವರು.

ಚುಟುಕು ಬರಿ ಶಬ್ದ ಚಮತ್ಕಾರವಲ್ಲ. ಅದು ಅನೇಕಾರ್ಥಗಳ ಅವಿಷ್ಕಾರಗಳಿಗೆ ನಾಂದಿ, ವ್ಯವದಾನವನ್ನೇ ಕಳೆದುಕೊಳ್ಳುತ್ತಿರುವ ಇಂದಿನ ಅವಸರದ ಬದುಕಿನಲ್ಲಿ ಮನುಷ್ಯ ಸಿಗುವ ಅಲ್ಪ ಸಮಯದಲ್ಲಿಯೇ ಓದಿ ಅದ್ಭುತವಾದದನ್ನು ಕಂಡುಕೊಳ್ಳುವಂತೆ ಮಾಡುವ ಸಾಹಿತ್ಯ ಪ್ರಕಾರ ಚುಟುಕು ಆಗಿದೆ. ಕೆ.ಎಸ್. ನಿಸಾರ್ ಅಹ್ಮದರು ಚುಟುಕು ಮತ್ತು ದೀರ್ಘ ಕವಿತೆಗಳ ನಡುವಿನ ವ್ಯತ್ಯಾಸವನ್ನು ಚುಟುಕು ಕವಿತೆಯ ಮುಖಾಂತರವೇ ಹೀಗೆ ಗುರುತಿಸಿರುವರು.

" ಚುಟುಕು ಚಿಲ್ಲರೆ
ಕವನ ನೋಟು
ಕವನ ನೌಕೆ
ಚುಟುಕು ಬೋಟು"[5]

---

2. ಕನ್ನಡ ಚುಟುಕು ಸಾಹಿತ್ಯ: ಸಿ.ಪಿ ಕೊಟ್ರೇಶ ಪು. 7 ಗು.ವಿ.ಗು. 2007

3. –ಅದೇ– ಪು. 4–8

4. –ಅದೇ– ಪು. 8.

ವ್ಯವಹಾರದಲ್ಲಿ ಬರೀ ದೊಡ್ಡ ದೊಡ್ಡ ನೋಟುಗಳಿದ್ದರೆ ವ್ಯಾಪಾರ ಕಷ್ಟಕರ ಆದಕ್ಕೆ ಚಿಲ್ಲರೆಯ ಬಳಕೆಯೂ ಇರಬೇಕಾಗುತ್ತದೆ. ಹಾಗೆಯೇ ದೂರದ ಊರು, ದೇಶಗಳಿಗೆ ಪ್ರಯಾಣ ಮಾಡಲು ದೊಡ್ಡ ದೊಡ್ಡ ನೌಕೆಗಳ ನೆರವು ಪಡೆಯುತ್ತೇವೆ. ಆದರೆ ಕೆರೆ, ಸರೋವರಗಳಲ್ಲಿ ಜಲವಿಹಾರ ಮಾಡಲು ಸಣ್ಣ ಬೋಟುಗಳೇ ಬೇಕಾಗುತ್ತದೆ. ಅಂತೆಯೇ ಕಿರಿದಾಗಿ ಮನಸ್ಸಿಗೆ ಮುದ ನೀಡಲು ಅನುಭವವನ್ನು ತೀವ್ರವಾಗಿ ಮನಂಬುಗುವಂತೆ ಹೇಳಲು ಸಣ್ಣ ರೂಪದ ಚುಟುಕಗೇ ಬೇಕಾಗುತ್ತವೆ.

ಕನ್ನಡ ಕಾವ್ಯ ಸಾಹಿತ್ಯದಲ್ಲಿ ಚುಟುಕು ಜನ ಪ್ರಿಯ ಪ್ರಕಾರವಾಗಿದೆ. ಚುಟುಕುಗಳನ್ನು ಓದದ, ಚುಟುಕುಗಳನ್ನು ಬರೆಯದ ಕವಿಗಳೇ ಇಲ್ಲವೆನ್ನುವಷ್ಟು ಅದು ಜನಪ್ರಿಯತೆಗಳಿಸಿದೆ. ಹಿರಿಯ ತಲೆಮಾರಿನ ಕವಿಗಳಿಂದ ಹಿಡಿದು ಉದಯೋನ್ಮುಖ ಕವಿಗಳವರೆಗೂ ಚುಟುಕುಗಳು ವ್ಯಾಪಿಸಿವೆ.

**ಚುಟುಕುಗಳ ಲಕ್ಷಣಗಳನ್ನು ಹೀಗೆ ಸಂಗ್ರಹಿಸಿ ಹೇಳಬಹುದು.**

1) ಕಿರಿದಾದ ಗಾತ್ರದಲ್ಲಿ ಹಿರಿದಾದ ಅರ್ಥ ಹೇಳುವುದು.
2) ರೂಪಕ ಪ್ರತಿಮೆಗಳನ್ನು ಬಳಸಿ ಸುಂದರ ಚಿತ್ರ ರೂಪವಾಗಿ ನೀಡುವುದು.
3) ಚುಟುಕ ಪದ್ಯದ ಜೀವಾಳ ಪ್ರಾಸ.
4) ಹಾಸ್ಯ, ಪ್ರೀತಿ, ಪ್ರಣಯ, ನಿಸರ್ಗ ಸೌಂದರ್ಯ ವಿಷಯ ವಸ್ತುಗಳನ್ನು ಹೇಳುವುದಕ್ಕೆ ಇರುವ ಸೂಕ್ತ ರೂಪ.
5) ಬಿಗಿಯಾದ ಛಂದಸ್ಸು ಹೊಂದಿರುವುದು.
6) ಕಡಿಮೆ ಪದಗಳಲ್ಲಿ ಹೆಚ್ಚು ವಿಷಯವನ್ನು ಅಡಗಿಸಿ ಸಹೃದಯರಲ್ಲಿ ಚಿಂತನೆಗೆ ಹಚ್ಚುವುದು.
7) ಚುಟುಕು ಮಿಂಚಿನ ರೂಪದಲ್ಲಿ ಹೊಳೆದು ಅದರ ಅನುಭವದ ಪರಿಣಾಮ ಬಹುಕಾಲ ಉಳಿಯುವಂತೆ ಮಾಡುವುದು.
8) ನಿರೂಪಣೆಯ ಮಿತವ್ಯಯ ಹೊಂದಿರುವುದು.
9) ಮಾಧುರ್ಯತೆ, ಅನ್ಯೋಕ್ತ, ಶಬ್ದ ಸುಭಗತೆ ಹೊಂದಿರುವುದು.
10) ಉದ್ದೇಶಿತ ಅರ್ಥವನ್ನು ಸಮರ್ಥವಾಗಿ ಧ್ವನಿಸುವುದು.

---

5. ಪಿ. ವೀರಣ್ಣ ಪ್ರತಿಭಟನೆ ಕಾವ್ಯ: ಪು. 9 ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು 1995

ಚುಟುಕುಗಳನ್ನು ಹೋಲುವ ಇತರ ಸಾಹಿತ್ಯ ರೂಪಗಳೆಂದರೆ ಜನಪದ ತ್ರಿಪದಿ, ಉಪನಿಷತ್ ವ್ಯಕ್ತಿಗಳು, ಶ್ಲೋಕಗಳು, ಶಿವಶರಣರ ವಚನಗಳು, ರುಬಾಯಿ, ಹಾಯ್ಕು, ಕಬೀರ ದಾಸರ ದೋಹಗಳು ಸರ್ವಜ್ಞನ ರಚನೆಗಳು ಮುಂತಾದವುಗಳಾಗಿವೆ.

ಹೊಸಗನ್ನಡದ ಸುಮಾರು ಏಳು-ಎಂಟು ದಶಕಗಳಲ್ಲಿ ಚುಟುಕು ತನ್ನದೇ ಆದ ಸ್ಥಾನವನ್ನು ಪಡೆದುಕೊಂಡಿದೆ. ಕುವೆಂಪು, ಜಿ.ಪಿ. ರಾಜರತ್ನಂ ದಿನಕರ ದೇಸಾಯಿ, ಕಾವ್ಯಾನಂದ, ವಿ.ಜಿ. ಭಟ್ಟ, ಎಂ. ಅಕ್ಬರ್ ಅಲಿ, ಸಿ.ಪಿ.ಕೆ. ಚಂಪಾ ಬಿ.ಎಂ. ಶ್ರೀ ಟಿ.ಪಿ.ಜಿ.. ಬಿ.ಆರ್. ಲಕ್ಷ್ಮಣರಾವ್ ದುಂಡಿರಾಜ್ ಬಸವರಾಜ ಸಬರದ ಗವೀಶ ಹಿರೇಮಠ ವೈದೇಹಿ ಎಚ್.ಎಸ್. ಮುಕ್ತಾಯಕ್ಕ, ಚನ್ನಣ್ಣ ವಾಲಿಕಾರ, ಶಿವಶರಣ ಪಾಟೀಲ ಜಾವಳಿ, ಡಿ.ಪಿ. ಬಡಿಗೇರ, ಮಲ್ಲಿಕಾ ಘಂಟಿ ಮುಂತಾದವರು ಹನಿಗವನ ಅಥವಾ ಚುಟುಕುಗಳನ್ನು ಬರೆದು ಸಂಕಲನ ರೂಪದಲ್ಲಿ ಪ್ರಕಟಿಸಿದ್ದಾರೆ.

ಬೀದರ ಜಿಲ್ಲೆಯ ಅನೇಕ ಕವಿಗಳು ಚುಟುಕುಗಳಲ್ಲಿ ವಿವಿಧ ಪ್ರಯೋಗ, ಸಾಧನೆಗಳನ್ನು ಮಾಡಿ ಕನ್ನಡ ಸಾಹಿತ್ಯಕ್ಕೆ ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ನೀಡಿದ್ದಾರೆ. ಅವರುಗಳಲ್ಲಿ ಪ್ರಮುಖವಾಗಿ ಡಾ. ಕಾಶಿನಾಥ ಅಂಬಲಗೆ, ಡಾ. ಪ್ರೇಮಾ ಸಿರ್ಸೆ, ಪ್ರೊ. ಸೂಗಯ್ಯ ಹಿರೇಮಠ, ಡಾ. ಮಲ್ಲಿಕಾರ್ಜುನ ಆಮ್ಲೆ, ಹಂಸಕವಿ, ಬಂಡೆಪ್ಪ ಖೂಬಾ, ದೇಶಾಂಶ ಹುಡುಗಿ, ಬಾಬುರಾವ ಗಾದಗಿ, ಚಂದ್ರಗುಪ್ತ ಚಾಂದಕವಟೆ, ಡಾ. ಬಾಬು ಪೂಜಾರಿ, ಶಿವರಾಜ ಪಾಟೀಲ, ವಜ್ರಾ ಪಾಟೀಲ, ರೇವಣ್ಣಪ್ಪ ಬಿ. ವಾಂಜರಖೇಡ ಸೂರ್ಯಕಾಂತ ವಿ. ನಿನ್ನೇಕರ, ವೀರಣ್ಣಗೌಡ, ವಿ.ಕೆ. ಸುನಿತಾ ವಿ. ಬಿರಾದಾರ, ವಿನುತಾ ಅಯ್ಯಂಗಾರ ಮುಂತಾದ ಕವಿಗಳಾಗಿದ್ದಾರೆ. ಅಲ್ಲದೆ ಇನ್ನೂ ಹಲವರು ದೀರ್ಘ ಕವಿತೆಗಳ ಜೊತೆ ಜೊತೆಗೆ ಚುಟುಕುಗಳನ್ನು ಬರೆದು ಹೆಸರು ಮಾಡಿದ್ದಾರೆ.

ಜಿಲ್ಲೆಯಲ್ಲಿ ಸಮೃದ್ಧವಾಗಿ ಬೆಳೆದ ಚುಟುಕು ಸಾಹಿತ್ಯವನ್ನು ಅವುಗಳ ವಿಷಯ ವಸ್ತು ಕವಿ ದೃಷ್ಟಿ ದರ್ಶನ, ಭಾಷೆ ಛಂದೋ ಪ್ರಯೋಗ ಮುಂತಾದವುಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅವುಗಳನ್ನು ಬಹು ನೆಲೆಯ ಅಧ್ಯಯನಕ್ಕೊಳಪಡಿಸುವುದು ಈ ಅಧ್ಯಾಯ ಮುಖ್ಯ ಉದ್ದೇಶವನ್ನು ಹೊಂದಿದೆ.

## 4.3. ಪ್ರಕೃತಿ ಚಿತ್ರಣ

ಪ್ರಕೃತಿ ಮತ್ತು ಮನುಷ್ಯರ ನಡುವೆ ಅವಿನಾಭಾವ ಸಂಬಂಧವಿದೆ. ಅನಂತವೂ, ರೋಚಕವೂ, ಸುಂದರವೂ ಆದ ಪ್ರಕೃತಿ ಮಾನವನ ಬಾಳಿಗೆ ಜೀವ ಸೆಲೆಯಾಗಿದೆ. ನಾಗರಿಕತೆ ಮತ್ತು ಸಂಸ್ಕೃತಿಗಳ ವಿಕಾಸಕ್ಕೂ ಪ್ರಕೃತಿಯೇ ಕಾರಣವಾಗಿದೆ. ಪ್ರಕೃತಿ ಅನೇಕ ರಹಸ್ಯಗಳ ಆಗರವೂ ಹೌದು ಈ ರಹಸ್ಯವೇ ರಮ್ಯ, ರೌದ್ರ, ಭಯಾನಕ, ಕೌತುಕ ಸೌಂದರ್ಯ ಭಾವನೆಗಳ ಜನ್ಮಕ್ಕೂ ಕಾರಣವಾಗಿವೆ. ಮನುಷ್ಯ ಅನೇಕ ಬಗೆಗಳಲ್ಲಿ ಈ ರಹಸ್ಯಗಳನ್ನು ಬಿಡಿಸುವ ನಿರಂತರ ಪ್ರಯತ್ನದಲ್ಲಿ ಒಂದೆಬಂದಿಲ್ಲ.

ಭಾವ ಜೀವಿಯಾದ ಕವಿ ತನ್ನ ಅಭಿವ್ಯಕ್ತಿ ಮೂಲಕ ಪ್ರಕೃತಿಯನ್ನು ನಾನಾ ರೂಪಗಳಲ್ಲಿ ಕಾಣುತ್ತಲೇ ಬಂದಿರುವನು. ಪ್ರಕೃತಿಯ ನಿತ್ಯ ರಮಣೀಯ ಸೌಂದರ್ಯ ಹಕ್ಕಿಗಳ ಇಂಚರ, ಪ್ರಾಣಿಗಳ ಆರ್ಭಟ ದುಂಬಿಗಳ ಝೇಂಕಾರ, ನದಿಯ ಕಲರವ, ಕಡಲ ಮೊರೆತ ಮರ–ಗಿಡ–ಬಳ್ಳಿ–ಚಿಗುರು, ಹೂವುಗಳ ಸುವಾಸನೆ, ಮಳೆ–ಮಿಂಚು ಸೂರ್ಯ, ಚಂದ್ರ ಚುಕ್ಕಿ ತಾರೆ ಬಿಸಿಲು, ಬೆಳದಿಂಗಳು ಎಲ್ಲವನ್ನೂ ಕಾವ್ಯ ವಸ್ತುವಾಗಿಸಿಕೊಂಡು ಪ್ರಕೃತಿ ಆರಾಧನೆಯಲ್ಲಿ ಕವಿ ತೊಡಗಿಸಿಕೊಂಡಿರುವುದನ್ನು ಕಾಣುತ್ತೇವೆ.

ಕವಿ ದೃಷ್ಟಿಯಲ್ಲಿ ಪ್ರಕೃತಿ ಜಡವಸ್ತುವಲ್ಲಿ ಅದು ಚೇತನಾಂಶಗಳಿಂದ ಕೂಡಿದೆ. ಕವಿ ತನ್ನ ಪ್ರತಿಭಾ ನಿಪುಣತೆಯಿಂದ ಪ್ರಕೃತಿಯನ್ನು ಜೀವಂತಗೊಳಿಸಬಲ್ಲನು ಎಂಬುದು ನಮ್ಮ ಮೀಮಾಂಸಕರ ಅಭಿಪ್ರಾಯವಾಗಿದೆ. ಪ್ರಕೃತಿಯನ್ನು ವಸ್ತುವಾಗಿ ಬಳಸಿಕೊಂಡು ಕಾವ್ಯ ರಚಿಸಿರುವುದನ್ನು ಕನ್ನಡ ಸಾಹಿತ್ಯದುದ್ದಕ್ಕೂ ಕಾಣುತ್ತೇವೆ. ಅದರಲ್ಲೂ ಇಪ್ಪತ್ತನೆಯ ಶತಮಾನದ ಹೊಸಗನ್ನಡ ಕಾವ್ಯ ಸಂದರ್ಭದಲ್ಲಿಯಂತೂ ಪ್ರಕೃತಿ ಕಾವ್ಯಕ್ಕೆ ಜೀವ ದ್ರವ್ಯವಾಗಿಯೇ ಬಂದಿದೆಯೆನ್ನಬೇಕು. ಹೊಸಗನ್ನಡದಲ್ಲಿ ಕವಿಗಳು ಪ್ರಕೃತಿ ಚಿತ್ರವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ಪ್ರಕೃತಿಯನ್ನು ಕುರಿತು ಕನ್ನಡದ ಖ್ಯಾತ ವಿಮರ್ಶಕರಾದ ಡಿ.ಆರ್. ನಾಗರಾಜ ಅವರು ಹೀಗೆ ಹೇಳಿರುವರು ಅವರ ಪ್ರಕಾರ[5] ಪ್ರಕೃತಿಯೆನ್ನುವುದು ಶುದ್ಧ ಐಂದ್ರಿಕ ಅನುಭವ ಹಾಗೂ ತಾತ್ವಿಕ ಶೋಧನೆ ಎರಡಕ್ಕೂ ಅದ್ಭುತವಾದ ಮಾಧ್ಯಮವಾಯಿತು. ಶುದ್ಧ ಐಂದ್ರಿಕ ಅನುಭವ ದೈವಿ ಅನುಭವದ ಜೊತೆಗೆ ತಳುಕು ಹಾಕಿಕೊಂಡಿತು"[6] ಒಟ್ಟಾಗಿ ಕವಿಗಳನ್ನು ಪ್ರಕೃತಿ ಅಥವಾ ನಿಸರ್ಗವನ್ನು ದೇವರಾಗಿ, ಅಗೋಚರ ಶಕ್ತಿಯೆಂದು ಪೂಜನ್ಯ ಭಾವನೆಯಿಂದ ಆರಾಧಿಸುತ್ತ ಬಂದಿರುವರು.

ಪ್ರಕೃತಿ ಮನುಷ್ಯನಿಗೆ ನೀಡುವ ಸಂದೇಶದ ಚಿತ್ರಣ ಇಲ್ಲಿದೆ.

"ಹೂವು – ಬೆಟ್ಟ
ಕಡಲು ಬಾನು
ಸಾರುತಿವೆ
ಕಂಪು ಬೀರು
ಎತ್ತರ ಬೆಳೆ
ಆಳಕ್ಕೆ ಇಳೆ
ವಿಶಾಲತೆ ಪಡೆಯೆಂದು"[7]

ಸೌಂದರ್ಯದ ಪ್ರತೀಕವಾದ ಪ್ರಕೃತಿ ಮನುಷ್ಯನಿಗೆ ಕೇವಲ ಚಲುವನ್ನು ಮಾತ್ರ ಪ್ರದರ್ಶಿಸಲಾರದೆ, ತನ್ನಿಂದ ಮನುಷ್ಯನು ಕಲಿಯಬೇಕಾದುದನ್ನು ತಿಳಿಸಿಕೊಡುತ್ತದೆ. ನವೋದಯ ಕವಿಗಳಲ್ಲಿ ಸಾಂಪ್ರದಾಯಿಕವಾಗಿ ಬಂದ ಪ್ರಕೃತಿ ವರ್ಣನೆ ಅನಂತರದ ಕಾಲದಲ್ಲಿ ಬರೆಯುವ ಕವಿಗಳ ಮೇಲೆ ತನ್ನ ಪ್ರಭಾವವನ್ನು ಬೀರುವುದು ಬಿಟ್ಟಿಲ್ಲ.

ಡಾ. ಪ್ರೇಮಾ ಸಿರ್ಸೆ ಅವರು ಪ್ರಕೃತಿ ಚಲುವಿನಿಂದ ಪ್ರೇರಿತವಾಗಿ ಹಾಡುವ ಕೋಗಿಲೆಯ ಚಿತ್ರವನ್ನು ನೀಡುವರು.

" ಎಲ್ಲೆಲ್ಲೂ
ಹೊಸ ಚಿಗುರು
" ಗಿಡವೆಲ್ಲ ಹೂವಾಗಿ
ಬನವೆಲ್ಲ ಹಸಿರಾಗಿ
ಚೈತ್ರದ ಚಲುವಿನ ನಗು
ಶೃಂಗಾರ ಹೆಣ್ಣಿನ
ಕಿಲಕಿಲ ನಗುವಂತೆ"[8]

ಪ್ರಕೃತಿ ಚೆಲುವವನ್ನು ಕಂಡ ಕವಿ ಮನಸ್ಸಿನಲ್ಲಿ ಸಹಜ ಸ್ಥಿತಿಯಿಂದ ಹೊಮ್ಮಿದ ಭಾವನೆಯೇ ಇಲ್ಲಿ ಕವಿತೆಯಾಘಿ ಮೂಡಿ ಬಂದಿದೆ. ಮನಸ್ಸಿನಂತೆ ಪ್ರಕೃತಿ ಪ್ರಕೃತಿಯಂತೆ ಮನಸ್ಸು ಎಂಬಂತೆ ಅವೆರಡೂ ಭಾವಗಳ ಅವಿನಾ ಸಂಬಂಧವನ್ನು ಕಾಣುತ್ತೇವೆ. ಪ್ರಕೃತಿಯನ್ನು ವಸ್ತುವಾಗಿಟ್ಟುಕೊಂಡು ಬರೆಯುವ ಬಹುತೇಕ ಕವಿಗಳ ಮೇಲೆ ನವೋದಯದ ಕವಿಗಳಾದ ಕುವೆಂಪು, ಬೇಂದ್ರೆ, ಪು.ತಿ.ನ. ಮುಂತಾದವರ ಪ್ರಭಾವ ಬೀರಿದ್ದನ್ನು ಅಲ್ಲಗಳೆಯಲಾಗದು.

ಪ್ರಕೃತಿ ಆರಾಧನೆಯಲ್ಲಿ ಸಾಂಪ್ರದಾಯಿಕ ದೈವಿ ಭಾವನೆಗಿಂತಲೂ ಸೌಂದರ್ಯ ದೃಷ್ಟಿಯೇ ಪ್ರಧಾನವಾಗಿದೆ. ಒಂದರ್ಥದಲ್ಲಿ ಸೌಂದರ್ಯ ಸತ್ಯದ ಅನ್ವೇಷಣೆಯೇ ಹೌದು. ಸತ್ಯ ಶಿವ ಸ್ವರೂಪವಾಗಿ, ಸೌಂದರ್ಯ ರೂಪವಾಗಿ ಕವಿಕಣ್ಣಿಗೆ ಗೋಚರಿಸುವುದು.

---

6. ಡಿ.ಆರ್. ನಾಗರಾಜ ಶಕ್ತಿಶಾರದೆಯ ಮೇಳ ಪು. 22 ಅಕ್ಷರ ಪ್ರಕಾಶನ ಸಾಗರ 1987
7. ವಜ್ರಾ ಪಾಟೀಲ ಮರ ಪು. 17 ಖಡ್ಗ ಪತ್ರಿಕೆ ಪ್ರಕಾಶನ ಬೀದರ 1994.

" ನೀಲಿಗಣ್ಣಿನ ಆಕಾಶವೆ
ನಿನೆಷ್ಟು ಸುಮಧುರವೆ
ನಿನ್ನ ಎಷ್ಟು ಹೊಗಳಲೆ
ನನ್ನ ಹತ್ತಿರ ಶಬ್ದಗಳೆ ಇಲ್ಲವೆ"[9]

ನಿಸರ್ಗದೊಡನೆ ಒಡನಾಟ ಬೆಳೆಸಿಕೊಂಡಿರುವ ಕವಿ ಅದನ್ನು

ಪ್ರಾಣದಂತೆ ಪ್ರೀತಿಸುವುದನ್ನು ನೋಡುವೆವು.

ಓಮ ಪರ್ವತದಲ್ಲಿ
ಶಿವ ಪಾರ್ವತಿ
ಒಟ್ಟಿಗೆ ಇರುತ್ತಾರೆ.
ಎಂಬ ಹಳ್ಳಿಗನ
ಕಲ್ಪನೆ ಎಂಥ ರೋಮಾಂಚನ"[10]

ಈ ಆರಾಧನೆಯಲ್ಲಿ ಮುಗ್ಧ ಮನಸ್ಸಿನಲ್ಲಿ ಹುಟ್ಟುವ ಕಲ್ಪನೆ, ಚಿಮ್ಮುವ ಉತ್ಸಾಹ ಹೊಸಕನಸು ನಂಬಿಕೆ ಲವಲವಿಕೆಗಳು ಪ್ರಾಣ ಸಂಚಾರಗೊಳಿಸಿರುವವು. ಶಿವ ಮತ್ತು ಪಾರ್ವತಿ ಪ್ರಕೃತಿ ಮತ್ತು ಪುರುಷ ರೂಪವಾಗಿ ಪುರುಷ ಶಕ್ತಿಗೆ ಆಧಾರವಾಗಿ ಪ್ರಕೃತಿ ಶಕ್ತಿಯು ಇರುವುದನ್ನು ಕವಿ ಬಲ್ಲನು.

ಪ್ರಕೃತಿ ಚಲುವಿನ ಕಾವಿನಲ್ಲಿ ಮೈದುಂಬಿಕೊಂಡ ಕಾವ್ಯಶಕ್ತಿ ಪ್ರಕೃತಿ ಸೌಂದರ್ಯವನ್ನು ಕ್ರಿಯಾಶೀಲತೆಯಿಂದ ಜಿಲ್ಲೆಯ ಕವಿಗಳು ಕಿರಿದಾದ ಚುಟುಕುಗಳಲ್ಲಿ ಪ್ರದರ್ಶಿಸಿದ್ದಾರೆ.

ಪ್ರಕೃತಿ ಸೌಂದರ್ಯವನ್ನು ಅನುಭವಿಸುವ ಮೂಲಕವಾಗಿಯೇ ಬದುಕಿನ ಅನುಭವಗಳನ್ನು ವಿಸ್ತರಿಸಿಕೊಳ್ಳುವ ಕವಿ ಪ್ರಜ್ಞೆ ವಾಸ್ತವತೆಗೆ ಸೂಕ್ಷ್ಮ ಸಂವೇದನೆ ನೀಡಿರುವುದನ್ನು ಇಲ್ಲಿನವರ ಕವಿತೆಗಳಲ್ಲಿ ಕಾಣದೆ ಇರಲಾರವು. ಮನುಷ್ಯ ಪ್ರಕೃತಿಯ ಕೂಸು, ಇವನು ಪ್ರಕೃತಿಯಿಂದಲೇ ಜನಿತ. ಪ್ರಕೃತಿಯಿಂದಲೇ ಪೋಷಿತ ಅನನ್ನ, ನೀರು, ಗಾಳಿ, ಬೆಳಕು ಅಷ್ಟೇ ಏಕೆ ಬದುಕನ್ನೇ ಪ್ರಕೃತಿಯಿಂದ ಕೊಡುಗೆಯಾಗಿ ಪಡೆದಿರುವನು ಪ್ರಕೃತಿ ಮತ್ತು ಬದುಕಿನ ಸಂಬಂಧವನ್ನು ಕವಿಗಳು ತಮ್ಮ

10. ಡಾ. ಬಿ.ಬಿ. ಪೂಜಾರಿ: ಮೂರು ಬಣ್ಣ ನೂರು ಕವನ ಪು. 50 ವೀರೇಶ ಪ್ರಕಾಶನ ಹುಮನಾಬಾದ 1987.

ಕವಿತೆಗಳಲ್ಲಿ ಗಟ್ಟಿಗೊಳಿಸಿರುವರು. ಡಾ. ಕಾಶಿನಾಥ ಅಂಬಲಗಿಯವರು ಪ್ರಕೃತಿಯಿಂದ ಅನೇಕನ್ನು ಪಡೆಯುವ ಮನುಷ್ಯ ಪ್ರಕೃತಿಗೆ ಏನನ್ನು ಕೊಡದ ಸಂಕುಚಿತನಾಗಿರುವುದನ್ನು ಬಕೀಟು ಕವಿತೆಯಲ್ಲಿ ಓಗೆ ಚಿತ್ರಿಸಿದ್ದಾರೆ.

---

8. ಡಾ. ಪ್ರೇಮಾ ಸಿರ್ಸೆ
9. ಶ್ವೇತಾರಾಣಿ ದೀಕ್ಷಿತ. ತಾಯಿ ಪು. 8 ಶಾಹಿನ್ ಶಾಲೆ ಮತ್ತು ಪ.ಪೂ ಕಾಲೇಜು ಬೀದರ 2007.

"ಹಳ್ಳ –ಕೊಳ್ಳ
ನೀರು–ನುಡಿ
ಆಗದ ನಾವು
ಈ ವ್ಯವಸ್ಥೆಯಲ್ಲಿ
ನೀರು ತುಂಬಿಡುವ
ಬಕೇಟು
ಮಾತ್ರ ಆಗಿದ್ದೇವೆ"[11]

ನಿಸರ್ಗ ವಿದೂರ ನೆಲೆಯ ದುಷ್ಪರಿಣಾಮಗಳ ಚಿತ್ರದಂತೆ ಇಲ್ಲಿನ ಕವಿತೆ ಮೂಡಿಬಂದಿದೆ. ಜೀವ ಸಮೃದ್ಧ ಪ್ರಕೃತಿಗೂ ಮಾನವಕೊಂಡಿತ ಸಮಾಜದ ನಡುವಿನ ಬಿರುಕನ್ನು ಮಾನವನ ಸ್ವಯಂ ಕೃತ ಅಪರಾಧಗಳನ್ನು ಕವಿತೆಗಳಲ್ಲಿ ಕಾಣಿಸಿರುವರು.

"ಹುಲಿ ಹುಲ್ಲೆ
ಹಾವು ಮಲುಗುಸಿ
ಪ್ರೀತಿ ಸೌಹಾರ್ದತೆಯಿಂದ
ಒಂದೆಡೆ ಬದುಕುವ
ದೇಶದಲಿ ಮಾನವತೆಯ
ಪ್ರೀತಿ ನಿಧಿಗಳಾದ
ಮನುಷ್ಯರು ಮಾತ್ರ
ಪೂರ್ವ ಪಶ್ಚಿಯ" [12]

ವಿಶ್ವ ವಾಣಿಜ್ಯ ವ್ಯಾಪಾರ ಒಪ್ಪಂದ ಜಾಗತೀಕರಣ ಮುಂತಾದ ಪರಿಣಾಮಗಳಿಂದಾಗಿ ಮನುಷ್ಯನ ಬದುಕು ನಿಸರ್ಗ ವಿದೂರ ನೆಲೆಯತ್ತ ಹೊರಟಿರುವ ಘೋರ ಪರಿಣಾಮಗಳನ್ನು ಚುಟುಕುಗಳಲ್ಲಿ ಎಚ್ಚರಿಸಿರುವರು. ಧನ ದಾಹಿಯ ಹಪಾಹಪಿತನಕ್ಕೆ ಸಿಕ್ಕು ನಿಸರ್ಗ ನಲುಗಿ ಹೋಗಿದೆ.

ಪ್ರಕೃತಿಯ ಜೀವ ಜಗತ್ತನ್ನು ನಾಶಗೈಯ್ಯುತ್ತಿರುವ ಯಂತ್ರ ನಾಗರಿಕತೆ ಇವತ್ತಿನ ಮನುಷ್ಯನ ವಿದ್ಯುಮಾನಗಳ ನೆಲೆಯಲ್ಲಿ ಪ್ರಕೃತಿಯನ್ನು ಪ್ರವಹಿಸಿದೆ. ಅದಕ್ಕೆ ಕವಿ ಪ್ರಕೃತಿಯೊಡನೆ ಸುಮಧುರ ಸಂಬಂಧಕ್ಕಾಗಿ ಹಾತೊರೆಯುವುದನ್ನು ಇಲ್ಲಿ ನೋಡಬಹುದು.

---

11. ಡಾ. ಕಾಶಿನಾಥ ಅಂಬಲಗೆ ಮೂವತ್ತೈದು ಕವನಗಳು ಪು. ಪ್ರಗತಿ ಪ್ರಕಾಶನ ಬಸವಕಲ್ಯಾಣ 1986
ಡಾ. ಪ್ರೇಮಾ ಸಿರ್ಸೆ : ಚುಕ್ಕಿಗಳು ಪು. 89 ಆನಂದ ಪ್ರಕಾಶನ ಬೀದರ. 1990.

" ಹಣವ ಆಸೆಗಾಗಿ
ಮರ ಕಡಿಯ ಬೇಡ
ಕಾಡು ಹಾಳು
ಮಾಡಬೇಡ
ಎಲ್ಲಿ ಹಸಿರು
ಅಲ್ಲಿ ಉಸಿರು
ಹಸಿರೇ ಜೀವಿಗಳ ಉಸಿರು" [13]

ಪ್ರಕೃತಿಯ ಮೇಲೆ ಮನುಷ್ಯ ದಾಳಿಯಿಟ್ಟು ತನ್ನ ಜೀವನಕ್ಕೇ ಸಂಚುಕಾರ ತಂದುಕೊಳ್ಳುವ ಅಪಾಯವನ್ನು ಎಚ್ಚರಿಸಿದ ಕವಿ ಹಸಿರು ನಮ್ಮೆಲ್ಲರ ಜೀವದ ಉಸಿರು ಎಂಬ ಸಂದೇಶ ಸಾರಲು ಮರೆಯುವುದಿಲ್ಲ.

ನವ್ಯ ಕಾವ್ಯದ ಬರಾಟೆಯಲ್ಲಿ ನಿಸರ್ಗಾನುಭವದ ಅಭಿವ್ಯಕತಿಯನ್ನು ಕಡೆಗಣಿಸಲ್ಪಟ್ಟಿತೆಂಬ ಪಾದ ಕೇಳಿಬಂದಿತಾದರೂ. ಆದರೆ ಸೃಜನಶೀಲ ಸವಾಲುಗಳು ನವ್ಯದ ನಂತರದಲ್ಲಿ ಪುನಃ ಮರುಕಳಿಸಿದ್ದು ಇಂದಿನ ಬಂಡಾಯೋತ್ತರದಲ್ಲಿ ಎನ್ನಬಹುದು.

ಕವಿಗಳಲ್ಲಿ ಒಂದು ಕಾಲಕ್ಕೆ ಜೀವ ಸಮೃದ್ಧ ಪ್ರಕೃತಿಯೊಂದಿಗೆ ಮನುಷ್ಯ ಹೊಂದಿದ್ದ ಸಂಬಂಧದ ಕೊಂಡಿ ಮರು ಜೋಡಣೆಯಾಗಬೇಕೆಂಬ ತವಕ ಕಾಳಜಿ ಈಗಿನ ಬಹುತೇಕ ಕವಿಗಳಲ್ಲಿದೆ. ಅಭಿವೃದ್ಧಿ ನೆನಪದಲ್ಲಿ ನಮ್ಮ ಜೀವ ಸಮೃದ್ಧ ನಿಸರ್ಗವೇ ನಾಶವಾಗಿ ಕೃತಕ ಕಾಂಕ್ರೇಟ್ ಕಾಡು ನಿರ್ಮಾಣಗೊಳ್ಳುತ್ತಿರುವ ಸಂದರ್ಭದಲ್ಲಿ ಕವಿಗಳಲ್ಲಿ ಹುಟ್ಟಿದ ಪ್ರಕೃತಿ ಕಾಳಜಿ ಚೇತೋಹಾರಿಯಾಗಿದೆ. ಮಾನವ ನಿಸರ್ಗದಿಂದ ದೂರು ಉಳಿದು ಬದುಕಲು ಸಾಧ್ಯವಿಲ್ಲವೆಂಬ ಸರ್ವ ಕಾಲಿಕ ಸತ್ಯದ ದರ್ಶನ ಕಾಣುತ್ತೇವೆ.

---

11. ಸೂರ್ಯಕಾಂತ ಎ. ನಿನ್ನೇಕರ ಬಯಕೆ ಪು. 29 ಧರಿನಾಡ ಕನ್ನಡ ಸಂಘ ಬೀದರ 2008.

## 4.4. ಸಾಮಾಜಿಕ ಚಿತ್ರಣ

ಸಮಾಜ ಮತ್ತು ಸಾಹಿತ್ಯಕ್ಕೂ ಅತ್ಯಂತ ನಿಕಟವಾದ ಸಂಬಂಧವಿದೆ. ಸಮಾಜ ಸ್ಥಾವರತ್ವವನ್ನು ಹೊಂದಿರದೆ, ಅದು ಜಂಗತ್ವವನ್ನು ಹೊಂದಿದೆ. ಸಮಾಜಕ್ಕೆ ಜಂಗತ್ವ ಗುಣ ಇದ್ದುದರಿಂದಲೇ ಅದು ಕಾಲ ಕಾಲಕ್ಕೆ ಬದಲಾವಣೆಯಾಗುತ್ತ ಬಂದಿರುವುದು. ಸಮಾಜ ಬದಲಾವಣೆ ಹೊಂದಿದಂತೆಲ್ಲ ಸಾಹಿತ್ಯದಲ್ಲೂ ಅಭಿವ್ಯಕ್ತಿಯಲ್ಲೂ ಬದಲಾವಣೆಗಳು ಸಂಭವಿಸುತ್ತ ಬಂದಿವೆ. ಸಾಮಾಜಿಕ ಘಟನೆಗಳೇ ಸಾಹಿತ್ಯವಾಗಿ ಮೂಡಿಬರುವುದು. ಯಾಕೆಂದರೆ ಕವಿಯೂ ಒಬ್ಬ ಸಾಮಾಜಿಕ ಜೀವಿಯೆಂಬುದನ್ನು ಮರೆಯಬಾರದು. ತನ್ನ ಬದುಕಿನಲ್ಲಿ ಇಲ್ಲವೇ ತಾನಿರುವ ಪರಿಸರದಲ್ಲಿ ಘಟಿಸುವ ಘಟನೆಗಳಿಂದ ಪ್ರಭಾವಿತನಾಗಿ ಕವಿಯು ಅವುಗಳನ್ನು ಕೃತಿರೂಪದಲ್ಲಿ ಸೃಷ್ಟಿಸುವನು.

ಹೀಗಾಗಿ ಸಮಾಜ ಮತ್ತು ಸಾಹಿತ್ಯ ಅವೆರಡೂ ಯಾವಾಗಲೂ ಒಂದಕ್ಕೊಂದು ಪರಸ್ಪರ ಪ್ರೇರಕ ಹಾಗೂ ಪೋಷಕಗಳಂತೆ ಕಾರ್ಯನಿರ್ವಹಿಸುತ್ತ ಬಂದಿವೆ.

ಪ್ರಭು ನಿಷ್ಠ ಮತ್ತು ಧರ್ಮ ನಿಷ್ಠ ಧೋರಣೆಗಳು ಪ್ರಬಲವಾಗಿದ್ದ ಕಾಲದಲ್ಲೂ ಕೂಡ ಸಾಮಾಜಿಕ ವಿನ್ಯಾಸಗಳು ಸಾಹಿತ್ಯ ರಚನೆ ಮೇಲೆ ನಿರಂತರ ಪ್ರೇರಣೆ ನೀಡುತ್ತ ಬಂದಿರುವುದನ್ನು ಕನ್ನಡ ಸಾಹಿತ್ಯ ಚರಿತ್ರೆಯುದ್ಧಕ್ಕೂ ಕಾಣುತ್ತೇವೆ. ಒಂದರ್ಥದಲ್ಲಿ ಸಾಹಿತ್ಯ ಸೃಷ್ಟಿಗೆ ಸಮಾಜ ಬಿತ್ತಿಯಾಗಿದೆ. ಬದಲಾದ ಎಲ್ಲ ಕಾಲದಲ್ಲೂ ಸಾಮಾಜಿಕ ವಿನ್ಯಾಸಗಳನ್ನು ಸಾಹಿತ್ಯ ವಿಶಿಷ್ಟ ರೂಪ, ಪ್ರಕಾರ, ಭಾಷೆಗಳಲ್ಲಿ ಅಭಿವ್ಯಕ್ತಿ ಕಾಣಿಸುತ್ತ ಬಂದಿರುವರು.

" ಸಮಾಜದ ಪ್ರತಿಬಿಂಬವೇ ಸಾಹಿತ್ಯ"[14] ಎಂಬ ಮಾತು ಸಾಹಿತ್ಯವು

ಸಾಮಾಜಿಕ ಘಟಮೆಗ: ದಾಖಲಾತಿವೆಂಬ ಅಭಿಪ್ರಾಯ ಮೂಡಿಸುವುದು. ಸಾಮಾಜಿಕ ಘಟನೆಗಳನ್ನು ಸಾಹಿತ್ಯ ಕೃತಿಗಳು ಬಿಂಬಿಸಿದರೆ ಸಮಾಜವನ್ನು ಪರಿವರ್ತಿಸಿ ಅದರ ಮುನ್ನಡೆಗೂ ಕಾರಣವಾಗಲಿಲ್ಲ ಗತಿಬಿಂಬವೂ ಆಗಬಲ್ಲವು. ಇದಕ್ಕೆ ಹನ್ನೆರಡನೆಯ ಶತಮಾನದ ವಚನ ಸಾಹಿತ್ಯವನ್ನು ಉದಾಹರಿಸಬಹುದಾಗಿದೆ. ವಚನಕಾರರವಾಗಿರುವುದನ್ನು ಕಾಣುತ್ತೇವೆ. ಅಂಥದೊಂದು ಸಾಮಾಜಿಕ ಪ್ರಜ್ಞೆಯ ವಿರಾಟ ದರ್ಶನ ನಮಗೆ ಮತ್ತೆ ಕಾಣಿಸಿಗುವುದು. ಹೊಸಗನ್ನಡ ಕಾವ್ಯದಲ್ಲಿ ಮಾತ್ರ.

---

14. ಡಾ. ಲೋಕೇಶ ಅಗಸನಕಟ್ಟೆ : ಕನ್ನಡ ಕಾವ್ಯ ; ಸಮಾಜ-ಸಂಸ್ಕೃತಿ ಪು. 70 ಆಲೋಕ ಪ್ರಕಾಶನ ಚಿತ್ರದುರ್ಗ 2003

ಹೊಸಗನ್ನಡ ಕಾವ್ಯ ತನ್ನ ಬಹುಮುಖ ಧಾನ್ಯಗಳಲ್ಲಿ ಸಾಮಾಜಿಕ ಪ್ರಜ್ಞೆಯನ್ನು ಒಂದಾಗಿಸಿಕೊಂಡಿದೆ.ಸ್ವಾತಂತ್ರ್ಯ ಪೂರ್ವದ ಕಾವ್ಯದಲ್ಲಿ ಸಾಮಾಜಿಕ ಪ್ರಜ್ಞೆ ರಾಷ್ಟ್ರೀಯ ಐಕ್ಯತೆಗೆ ಶ್ರಮಿಸಿವುದರ ಜೊತೆಗೆ ಸಾಮಾಜಿಕ ಮೂಲವಾದ ಜಾತಿ, ವರ್ಣ, ವರ್ಗ ಅಸಮಾನತೆ, ಮೌಢ್ಯತೆಯ ವಿರುದ್ಧವಾಗಿ ಧ್ವನಿಯೆತ್ತಿತ್ತು. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಇವು ತಿರುವು ಮುರುವುಗಳಾದವು. ಈ ಕಾಲದ ಸಾಮಾಜಿಕ ಪರಿಸ್ಥಿತಿಗಳಿಗೆ ವ್ಯಕ್ತಿ, ರಾಜಕೀಯ, ಆರ್ಥಿಕ ಮುಂತಾದ ಶಕ್ತಿಗಳು ಕಾರಣಗಳಾದವು.

ಇಪ್ಪತ್ತನೆಯ ಶತಕದ 70ರ ದಶಕದಿಂದ ಕಾವ್ಯದಲ್ಲಿ ಸಾಮಾಜಿಕತೆಯೇ ಪ್ರಧಾನ ಸ್ಥಾಯಿಯಾಗಿ ಬಂದಿತೆಂಬುದಕ್ಕೆ ಈ ಕಾಲದ ದಲಿತ ಬಂಡಾಯ ಕಾವ್ಯವೇ ಸಾಕ್ಷಿಯಾಗಿದೆ ಬೀದರ ಜಿಲ್ಲೆಯಲ್ಲಿನ ಕವಿಗಳನ್ನು ಈ ಚಳುವಳಿ ಪ್ರಭಾವಿಸದೇ ಬಿಡಲಿಲ್ಲ. ಕೆಲವು ಕವಿಗಳು ನೇರವಾಗಿ ಭಾಗವಹಿಸಿ ಆ ಚಳುವಳಿಯ ನಿಲುವುಗಳನ್ನು ಕಾವ್ಯದಲ್ಲಿ ಪ್ರಕಟಿಸಿದ್ದಾರೆ. ಇನ್ನೂ ಕೆಲವರು ಬಂಡಾಯ ಚಳುವಳಿಯಲ್ಲಿ ನೇರವಾಗಿ ಪಾಲ್ಗೊಳ್ಳದಿದ್ದರೂ ಅವುಗಳ ಧೋರಣೆಗಳನ್ನಿಟ್ಟುಕೊಂಡು ಬರೆದರು. ಜಿಲ್ಲೆಯ ಕವಿಗಳ ಕವಿತೆಗಳಲ್ಲಿ ವ್ಯಕ್ತಗೊಂಡಿರುವ ಸಾಮಾಜಿಕ ಪ್ರಜ್ಞೆಯನ್ನು ಇಲ್ಲಿ ಚರ್ಚಿಸಲಾಗುತ್ತಿದೆ.

ಮನುಷ್ಯ ಸಮಾಜದ ಅಂಗ ಸಾಮಾಜಿಕ ಸ್ಥಿತ್ಯಂತರಗಳನ್ನು ಆತನು ನೇರವಾಗಿ ಗಮನಿಸುವನು. ಹೀಗಾಗಿ ವ್ಯಕ್ತಿ ನೆಲೆಯಿಂದಲೇ ಕವಿ ಸಮಾಜದ ಆಗುಹೋಗುಗಳನ್ನು ಮಲಕು ಹಾಕುವುದನ್ನು ಡಾ. ಕಾಶಿನಾಥ ಅಂಬಲಗೆಯವರ ಒಂದು ಕವಿತೆಯಲ್ಲಿ ಹೀಗೆ ಮೂಡಿ ಬಂದಿದೆ.

"ಕನ್ನಡಿಯಲ್ಲಿ ನೋಡುತ್ತೇನೆ
ಒಡೆದು ಒಡೆದು ಹೋಗಿದ್ದೇನೆ
ತಿಳಿಯಾದ ನೀರಲ್ಲಿ ನೋಡುತ್ತೇನೆ
ಹರಿದು ಹರಿದು ಹೋಗಿದ್ದೇನ
ಜಾತಿ ಹೀನನ ಮನೆಯ ಜ್ಯೋತಿ ತಾ ಹೀನವೆ
ಓದುತ್ತೇನೆ
ಒಂದೊಂದೇ ಅಕ್ಷರ ಕಿತ್ತಿ ಕಿತ್ತಿ
ಎಸೆಯುತ್ತೇನೆ"[15]



ಕವಿ ಸಾಮಾಜಿಕ ಅಸಮಾನತೆಗೆ ವ್ಯಪ್ತವಾಗುತ್ತಾರೆ. ಇಂದು ಬದುಕು ಅಸಹಜವಾಗಿದೆ. ಇದಕ್ಕೆ ಕಾರಣ ಮನುಷ್ಯ. ಮನುಷ್ಯ ಮನುಷ್ಯರ ನಡುವೆ ಉದ್ಭವಿಸಿರುವ ತಾರತಮ್ಯ ಭಾವ, ಜಾತಿ, ವರ್ಣಗಳೆಂಬ ಗೋಡೆಗಳಲ್ಲಿ ಸಿಕ್ಕು ಮನುಷ್ಯನೇ ಕಳೆದು ಹೋಗಿದ್ದಾನೆ. ಸಂಬಂಧಗಳು ನಾಶವಾಗಿ ಹೋಗಿದ್ದಕ್ಕೆ ವಿಷಾದವಿದೆ. ಮತ್ತೊಂದೆಡೆಗೆ ಡಾ. ಬಿ.ಬಿ. ಪೂಜಾರಿ ಅವರ ಕವಿತೆ ಹೀಗಿದೆ.

"ಈ ಬಂಗಲೆಯಲ್ಲಿ ನೋಡಿ
ನಾಯಿಗಾಗಿ
ಸೊಗಸಾದ ಮನೆಯಿದೆ
ಅದನ್ನು
ಕಾಯಲು ಒಬ್ಬ ಗೋರ್ಖಿ
ಅಂದರೆ
ನಾಯಿಯನ್ನು ಕಾಯಲು
ಮನುಷ್ಯ ಛೀ !"[16]

ಹೀಗೆ ಪ್ರಾಣಿಗಳ ಮೇಲಿರುಷ್ಟು ಉಳ್ಳವರ ಪ್ರೀತಿ ಮನುಷ್ಯರ ಮೇಲೆ ಇರದೇ ಹೋದುದರ ಬಗೆಗೆ ವಿಷಾದ ವ್ಯಕ್ತವಾಗಿದೆ. ಈ ಎಲ್ಲಾ ಅವ್ಯವಸ್ಥೆಗೆ ವರ್ಗ ವ್ಯತ್ಯಾಸವೇ ಕಾರಣ. ಡಾ. ಅಂಬಲಗೆ, ಡಾ. ಪೂಜಾರಿ, ಡಾ. ಮಲ್ಲಿಕಾರ್ಜುನ ಆಮ್ಲೆ, ಡಾ. ವಿಜಯಶ್ರೀ ಹಾಗೂ ಅನೇಕರು ಕವನಗಳಲ್ಲಿ ಮನುಷ್ಯ ಸಂಬಂಧಗಳಲ್ಲಿನ ವ್ಯತ್ಯಾಸಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಕಟ್ಟಿಕೊಟ್ಟಿರುವರು.

ಸಮಾಜದ ವಿಕ್ಷಿಪ್ತತೆಯನ್ನು ಕಂಡ ಕವಿಗಳಿಗೆ ವ್ಯಥೆ ಗಂಭೀರವಾಗಿ ಆವರಿಸಿಕೊಂಡಿದೆ. ಒಂದು ಕಡೆ ಕವಿ

ನಾನು ಹೆದರುವುದಿಲ್ಲ
ಬಿರುಗಾಳಿ ಕೋಲ್ಮಿಂಚಿಗೆ
ನಾನು ಹೆದರುತ್ತೇನೆ
ನಮ್ಮದೆ ಜನರ ಒಳ ಸಂಚಿಗೆ !"[17]

ಹಾಗೆಯೇ ಮತ್ತೊಂದೆಡೆಗೆ ವಜಾ ಪಾಟೀಲು ಅವರು ಹಸವಿನ ತೀವ್ರತೆಯನ್ನು ಹೀಗೆ ಹೇಳುತ್ತಾರೆ.

ಹಸಿದ
ಹೊಟ್ಟೆಗಳಿಗೆ
ಬೇಕಿಲ್ಲ
ಭಾಷಣ !
ಬೇಕಿರೋದು
ಹೊಟ್ಟೆ
ತುಂಬ ಅನ್ನ"[18]

15. ಡಾ. ಕಾಶಿನಾಥ ಅಂಬಲಗೆ : ಮೂವತ್ತೈದು ಕವನಗಳು ಪು. 22 ಪ್ರಗತಿ ಪ್ರಕಾಶನ ಬಸವಕಲ್ಯಾಣ 1986
16. ಡಾ. ಬಿ.ಬಿ. ಪೂಜಾರಿ ಮೂರು ಬಣ್ಣ ನೂರು ಕವನ ಪು. 81. ವೀರೇಶ ಪ್ರಕಾಶನ
17. ದ್ರುವರಾಜ ಜ್ಯೋತಿ ಹನಿಜೇನು (ಸಂ) ವಿ.ಎಚ್. ವೀರಣ್ಣ ಪು. 49 ವಿ.ಎಚ್. ಪ್ರಕಾಶನ ಮಂಠಾಳೆ 2003
18. ವಜ್ರಾ ಪಾಟೀಲ ಮನದಾಳ ಪು. 14 ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಸಂಘ ಬೀದರ 1999.

ಸಂವೇದನೆ ಹಾಗೂ ಅಭಿವ್ಯಕ್ತಿಯಿಂದ ವಿಶಿಷ್ಟರಾಗುವ ಕವಿಗಳಲ್ಲಿ ಕ್ರಿಯೆಗೊಳ್ಳುವ ಸಾಮಾಜಿಕ ಚಿಂತನೆಯ ತವಕ ಹುಡುಕಾಟದ ನೆಲೆಯಲ್ಲಿ ಸಾಗುತ್ತದೆ.

ಚಂದ್ರಗುಪ್ತಿ ಚಾಂದಕವಠೆಯವರು ಬದುಕನ್ನು ಅರಸುವ ಪರಿ ಹೀಗಿದೆ.

"ಬದುಕು
ಬಸವಳಿದು
ಬದುಕಿದವರು
ಸಾವು ಬದುಕಿನ
ಮಧ್ಯ
ಬದುಕ ಹುಡುಕಿ
ಬರುವವರ
ಬದುಕನೆ
ಬರಡಾಗಿಸುವ
ನಾವು ಬದುಕಬೇಕಲ್ಲವೆ
ನಮ್ಮ
ಬದುಕ"[19]

ಎಂದು ಕೇಳುತ್ತಾರೆ. ವರ್ತಮಾನದ ಆತಂಕ ಅಸಹಾಯಕತೆಗಳಿಗೆ ಉತ್ತರ ಹುಡುಕುವ ಪ್ರಯತ್ನಕ್ಕೆ ಕವಿಯು ತೊಡಗುವನು. ಯಾರೋ ನಮ್ಮ ಬದುಕನ್ನು ಕಸಿದುಕೊಳ್ಳುತ್ತಿದ್ದಾರೆಂದು ಕೊಂಡು ತಳಮಳಗೊಳ್ಳುವ ಕವಿ ಅದಕ್ಕಾಗಿ ನೊಂದುಕೊಳ್ಳುತ್ತಾನೆ. ಇಂಥ ಮನಸ್ಸು ಜಿಲ್ಲೆಯಲ್ಲಿ ಬರೆಯುತ್ತಿರುವ ಅನೇಕ ಕವಿಗಳದ್ದೂ ಆಗಿದೆ ಎನ್ನಬೇಕು. ಇಡೀ ಬದುಕಿಗೆ ಪ್ರತಿಮೆಯಾಗಬಲ್ಲ ಚುಟುಕುಗಳು ಮೂಲ ದ್ರವ್ಯವೇ ಬದುಕಿನ ಅಸ್ತಿತ್ವ ಉಳಿಸಿಕೊಳ್ಳುವ ಸೆಣಸಾಟವನ್ನು ನೆನಪಿಸುತ್ತವೆ.

ಸುಳ್ಳು ಬರವಸೆಗಳನ್ನು ಬಿತ್ತಿ ಕನಸ್ಸುಗಳನ್ನು ಸೃಷ್ಟಿಸುತ್ತ ತಮ್ಮ ಸ್ವಾರ್ಥ ಸಾಧನೆಯನ್ನು ಬಯಸುವ ಜನನಾಯಕರಿಂದ ಇಂದು ದೇಶವಾಗಲಿ, ಸಮಾಜವಾಗಲಿ ಉದ್ಧಾರವಾಗಲಾರದು ಎಂಬ ವಾಸ್ತವ ಸತ್ಯವನ್ನು ಕಂಡುಕೊಳ್ಳುವುದಕ್ಕೆ ಕವಿಗಳಿಗೆ ಬಹಳ ಕಾಲ ಹಿಡಿಯಲಿಲ್ಲ. ನಕಲಿ ಶಾಮರು, ಬಾಲಬಡುಕರದ್ದೆ ಕಾರಬಾರು ತುಂಬಿದ ಸಮಾಜದಲ್ಲಿ ದನಿಕಳೆದುಕೊಂಡವರ ಪಾಡು ಹೇಳತೀರದು. ಎಂ.ಜಿ. ದೇಶಪಾಂಡೆಯವರು ರಾಜಕಾರಣಿಗಳ ಬಣ್ಣದ ಮಾತುಗಳನ್ನು ವ್ಯಂಗ್ಯ ಧ್ವನಿಯಲ್ಲಿ ಹೀಗೆ ಹೇಳುವರು.

"ಭಾಷಣದಲ್ಲಿ ಹೇಳಿದರು" ಗರೀಬೀ ಹಟಾವೊ"
ಕೃತಿಯಲ್ಲಿ ತೋರಿಸಿದರು 'ಗರೀಬಕೋ ಹಟಾವೊ'
ಅವಧಿ ಮುಗಿದಾಗ ನುಡಿದರು 'ಓಟಿಗೆ ಹಾಥ ಬಟಾವೊ"[20]
ಇದು ನಮ್ಮ ರಾಜಕಾರಣಿಗಳ ಸೊಗಲಾಡಿತನದ ಚಿತ್ರವಾಗಿದೆ.

---

19. ಚಂದ್ರಗುಪ್ತ ಚಾಂದಕವಠೆ : ಮಿಡಿತ ಪು. 23 ತೇಜಸ್ವಿ ಪ್ರಕಾಶನ ಬೀದರ 2004.

ನಮ್ಮ ದೇಶದ ಬಹುದೊಡ್ಡ ಸಾಮಾಜಿಕ ಸಮಸ್ಯೆಗಳಲ್ಲಿ ಜಾತಿ ಮತ್ತೊಂದು ವರ್ಗಗಳಿದ್ದಾಗಿದೆ. ಪಟ್ಟಭದ್ರ ಹಿತಾಸಕ್ತಿಗಳು ಸಾವಿರಾರು ವರ್ಷಗಳಿಂದ ನಿರಂತರವಾಗಿ ಈ ಎರಡು ನೆಲೆಗಳಲ್ಲಿ ಜನಸಾಮಾನ್ಯರನ್ನು ಶೋಷಣೆ ಮಾಡುತ್ತ ಬಂದಿವೆ. ಅಂತೆಯೇ ಶ್ರೇಣಿಕೃತ ಸಮಾಜದ ನಿರ್ನಾಮ ಸಂಕಲ್ಪ ಹೊತ್ತು ಭಾರತೀಯ ನೆಲದಲ್ಲಿ ಅನೇಕ ಚಳುವಳಿಗಳೇ ನಡೆದವು. ಅವು ಮುಖ್ಯವಾಗಿ ಸಮಾಜ ಮುಖಿ ಚಳುವಳಿಗಳಾಗಿದ್ದರೂ ಸಾಹಿತ್ಯ ಸೃಷ್ಟಿ ಮಾಡಿದ್ದು ವಿಶೇಷವೆಂದೇ ಹೇಳಬೇಕು. ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಸಾಮಾಜಿಕ ಶೋಷಣೆ ವಿರುದ್ಧ ಆಂದೋಲನ ರೂಪನ ಜನಪರ ಕಾಳಜಿಯನ್ನು ಬಂಡಾಯ ಸಾಹಿತ್ಯ ಮೆರೆಯಿತು ಅಂಥ ಬಂಡಾಯದ ಧೋರಣೆಗಳು ಇಲ್ಲಿನವರ ಚುಟುಕುಗಳಲ್ಲಿ ಕಾಣುವೆವು.

ಬಂಡಾಯ ಆಚೆಗೆ ನಿಂತು ಕಾವ್ಯ ಬರೆದ ಡಾ. ಜಿ.ಬಿ. ನಿಸಾಜಿ ದೇಶಾಂಶ ಹುಡಗಿ ಹಂಶ ಕವಿ ಡಾ. ಮಾಣಿಕರಾವ ಧನಶ್ರೀಯಂಥ ಹಿರಿಯ ಕವಿಗಳ ಸಂಕಲನಗಳಲ್ಲಿ ಬಂಡಾಯದ ಕಾವ್ಯ ಬೀಜಗಳನ್ನು ಕಾಣಬಹುದಾಗಿದೆ. ಡಾ. ಮಲ್ಲಿಕಾಜುನ ಆವೆಲ್ಲ ಅವರು ಮಾನವತೆಗಿಂತಲೂ ಸಿರಿವಂತಿಕೆ ಬದುಕೇ ಹೆಚ್ಚಾಗಿದ್ದುದನ್ನು ಈ ರೀತಿ ಸೆರೆ ಹಿಡಿದಿರುವರು.

"ಗುಡಿಸಲಿನಲಿ ನಿಂತು ಗುಡುಗಿ  
ಬಂಗ್ಲೆ ನಡುಗಿಸಿದ  
ಬಂಡಾಯದ ಗೆಳೆಯ  
ಕಾಲಕ್ರಮದಲ್ಲಿ  
ತಾನೂ ಬಂಗ್ಲೆಯಲ್ಲಿ ನಿಂತು  
ಗುಡಿಸಿಲ ದಿಕ್ಕಿನ ಕಿಟಕಿ  
ಮುಚ್ಚಿಕೊಂಡ"[21]

ಇಲ್ಲಿ ವ್ಯವಸ್ಥೆಯ ದುರ್ಲಭ ಪಡೆದುಕೊಂಡು ಶೋಷಿತರ ಪರ ಧ್ವನಿಯಾಗಬೇಕಿದ್ದವನೇ ಶೋಷಣೆಗೆ ತೊಡಗಿದ ವ್ಯಕ್ತಿಯ ಮುಖವಾಡವನ್ನು ಬಯಲಿಗೆಳೆದಿರುವರು.

ನವೋತ್ತರ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಅನೇಕ ಸಂವೇದನೆಗಳನ್ನು ನೀಡಿದೆ. ಅವುಗಳಲ್ಲಿ ಸ್ತ್ರೀ ಸಂವೇದನೆಯೂ ಒಂದಾಗಿದೆ ಡಾ. ವಿಜಯಶ್ರೀ ಸಬರದ, ಢಾ. ಪ್ರೇಮಾ ಸಿರ್ಸೆ, ವಜ್ರಾ ಪಾಟೀಲು ರಶ್ಮಿ ಸುವರ್ಣ ಮಾಲಾ, ಶ್ವೇತಾರಾಣಿ, ಮಂಗಲಾ ವಿ. ಕಪರೆ ಮಲ್ಲಮ್ಮ ಚೆನ್ನಮ್ಮ ವಲ್ಲೆಪೂರೆ ಮುಂತಾದವರು ಸ್ತ್ರೀವಾದಿ ನಿಲುವುಗಳನ್ನು ತಮ್ಮ ಚುಟುಕುಗಳಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಹಿಡಿದಿದ್ದಾರೆ.

---

20 ಎಂ.ಜಿ. ದೇಶಪಾಂಡೆ : ಅನ್ವೇಷಣೆ ಪು. 31 ಖಡ್ಗ ಪತ್ರಿಕೆ ಪ್ರಕಾಶನ ಬೀದರ 1994.

21. ಡಾ. ಮಲ್ಲಿಕಾರ್ಜುನ ಆಮ್ಣೆ : ನಾನು ನೀನು ಪು. 49 ನವಕ್ರಾಂತಿ ಪ್ರಕಾಶನ ಸೋನಕೇರಾ ಹುಮನಾಬಾದ 2006.

ಶ್ವೇತಾರಾಣಿ ಅವರು" ಓ ಪುರುಷರೇ ನೀವು ಮೆರೆದಾಡಬೇಡಿರಿ ನಿಮ್ಮಲಗಾಮಿದು ನಮ್ಮ ಕೈಯ್ಯಾಲಿದೆ"

ಎಂದು ಹೆಣ್ಣು ಗಂಡಿಗಿಂತಲೂ ಯಾವುದರಲ್ಲಿಯೂ ಕಡಿಮೆಯಿಲ್ಲ ಎನ್ನುತ್ತಾರೆ. ವಜ್ರಾ ಪಾಟೀಲರು ಸಾಕು

"ಹೆಣ್ಣೆ ಸಾಕು ಇನ್ನು
ಕಣ್ಣೀರ ಕಪಿತೆ
ನೀ ಬರೆ ಇನ್ನು
ನೂತನ ತರಿತೆ"[22]

ಎಂದೂ ಚನ್ನಮ್ಮ ವಲ್ಲೆಪುರೆರವರು ಹೆಣ್ಣು ಲೋಕದ ಕಣ್ಣು ಎಂದು ಹೇಳಿ ಹೆಣ್ಣಿನ ಬಗೆಗಿರುವ ಕೀಳರಿಮೆ ಹೋಗಲಾಡಿಸಲು ಯತ್ನಿಸುವರು.

ಸಮಾಜದಲ್ಲಿ ಎಲ್ಲರಿಗೂ ಬದುಕುವ ಹಕ್ಕಿದೆ. ಅಲ್ಲಿ ಬಡವ ಬಲ್ಲಿದ ಗಂಡು-ಹೆಣ್ಣು, ಮೇಲು-ಕೀಳು ಎಂಬ ಭಾವನೆ ತೊಲಗಿ ಸರ್ವರಿಗೂ ಸಮಬಾಳು ದೊರೆಯಬೇಕೆಂಬ ಆಶಯ ಧ್ವನಿ ಚುಟುಕುಗಳಲ್ಲಿ ಪ್ರಧಾನವಾಗಿ ಮೂಡಿ ಬಂದಿದೆ.

## 4.5. ಪ್ರೀತಿ–ಪ್ರೇಮ ಚಿತ್ರಣ

ಕವಿಗಳಿಗೆ ಪ್ರೇಮವು ಅತ್ಯಂತ ಪ್ರೀತಿಯ ವಸ್ತುವಾಗಿದೆ. ಪ್ರೇಮವನ್ನು ಕುರಿತು ಬರೆಯದೆ ಕವಿಯೇ ಇಲ್ಲ. ನಮ್ಮ ಪ್ರಾಚೀನ ಕವಿಗಳಾದ ದಾಸ, ಪಂಪನಿಂದ ಹಿಡಿದು ಹೊಸಗನ್ನಡದವರೆಗೂ ಎಲ್ಲ ಕವಿಗಳ ಕಾವ್ಯದಲ್ಲಿ ಪ್ರೇಮ ಸ್ಥಾನ ಪಡೆಯದೇ ಹೋಗಿಲ್ಲ. ಈ ಮಾತು ಕನ್ನಡವನ್ನು ಒಳಗೊಂಡು ಜಗತ್ತಿನ ಎಲ್ಲ ಭಾಷೆಯ ಕವಿಗಳಿಗೂ ಅನ್ವಯಿಸುತ್ತದೆ. ಏನೇ ಇದ್ದರೂ ಪ್ರೇಮವು ಒಂದು ಕಾವ್ಯ ಪರಿಕಲ್ಪನೆಯಾಗಿ ಕಾವ್ಯ ವಸ್ತುವಾಗಿ ಹೆಚ್ಚು ಬಳಕೆಯಾದುದ್ದನ್ನು ಮರೆಯುವಂತಿಲ್ಲ.

ಇಂಗ್ಲೀಷ ರೋಮ್ಯಾಂಟಿಕ ಕಾವ್ಯ ಪ್ರಭಾವದಿಂದ ನವ ಚೈತನ್ಯ ಪಡೆದುಕೊಂಡು ಬೆಳೆದ ಹೊಸಗನ್ನಡ ಕಾವ್ಯವು ಪ್ರೇಮವನ್ನು ವಸ್ತು, ತಂತ್ರವಾಗಿಸಿಕೊಂಡು ಭಾವಗೀತೆ ರೂಪದಲ್ಲಿ ಬೆಳೆಯಿತು ಬಿ.ಎಂ. ಶ್ರೀಯವರ 'ಇಂಗ್ಲೀಷ ಗೀತೆಗಳು' ಹೊಸಭಾಷೆ, ಭಾವಗಳಲ್ಲಿ ಪ್ರೇಮ ಚಿತ್ರಣಕ್ಕೆ ನಾಂದಿ ಹಾಡಿತು ಪ್ರೀತಿ–ಪ್ರೇಮ–ಪ್ರಣಯ ಭಾವವನ್ನು ಹೊಸ ಭಾಷೆಯಲ್ಲಿ ಕಟ್ಟಿಕೊಡುವಲ್ಲಿ ಇಂಗ್ಲೀಷ ಗೀತೆ ಸಾಕಷ್ಟು ಶಕ್ತಿಯನ್ನು ನೀಡಿದ್ದರಲ್ಲಿ ಯಾವುದೇ ಅನುಮಾನವಿಲ್ಲ. "ಸ್ತ್ರೀ ಪುರುಷರ ಸಂಬಂಧವನ್ನು ಕೇವಲ ಶಾರೀರಿಕ ವಿವರಗಳ ಉತ್ಥಾನ ಶೃಂಗಾರದ ನೆಲೆಯಲ್ಲಿ ನಿಲ್ಲಿಸದೆ ಭಾವ ಭರಿತವಾದ ಪ್ರೇಮದ ನೆಲೆಗೆ ವರಿಸಿದ್ದ ಇಂಗ್ಲಿಷ ಗೀತೆಗಳ ಮತ್ತೊಂದು ಸಾಧನೆ"[22]ಯಾಗಿದೆ. ತಿ.ನಂ.ಶ್ರೀ ಕುವೆಂಪು, ಬೇಂದ್ರೆ ಕೆ.ಎಸ್. ನರಸಿಂಹ ಸ್ವಾಮಿ, ಜಿ.ಎಸ್. ಶಿವರುದ್ರಪ್ಪ, ಚನ್ನವೀರ ಕಣವಿ, ನವ್ಯದ ಅನೇಕ ಕವಿಗಳು ಕಾವ್ಯ ಕಾಳಜಿಗಳಲ್ಲಿ ಪ್ರೇಮವೂ ಒಂದಾಯಿತು ತಿ.ನಂ. ಶ್ರೀಯವರ ಒಲುಮೆ, ಕುವೆಂಪುರವರ ಕೇಳಲು ಐತಿಹಾಸಿಕ ದೃಷ್ಟಿಯಿಂದ ಗುರುತಿಸುವ ಪ್ರೇಮ ಕವನ ಸಂಕಲನಗಳಾಗಿವೆ.

ಒಟ್ಟಾರೆ ನಮ್ಮ ಕವಿಗಳು ಪ್ರೇಮಗೀತೆಗಳನ್ನು ಬರೆಯದೆ ಹೋಗಿಲ್ಲ. ಸುಮಾರು ಐದು ದಶಕಗಳ ಬೀದರ ಜಿಲ್ಲೆಯ ಐದು ದಶಕಗಳ ಕಾವ್ಯ ಚರಿತ್ರೆಯಲ್ಲಿ ಪ್ರೇಮ–ಪ್ರೀತಿ–ಯಂಥ ವಸ್ತು ವ್ಯಾಪಕವಾಗಿ ಬಳಕೆಯಾಗಿದ್ದು ಕಂಡು ಬರುತ್ತದೆ. ಕೆಲವರಲ್ಲಿ ನಿಸರ್ಗದ ಮೇಲೆ ರಾಷ್ಟ್ರ, ನಾಡು, ನುಡಿಗಳ ಮೇಲೆ ಪ್ರೇಮ ಮೂಡಿದ್ದರೆ, ಇನ್ನು ಹಲವರಲ್ಲಿ ಮನುಷ್ಯ ಸಂಬಂಧಗರ ನಡುವೆ ಪ್ರೇಮ ವಸ್ತುವಾಗಿ ಬಂದಿರುವುದನ್ನು ಕಾಣುವೆವು ಮೂಲತಃ ಮನುಷ್ಯ ಸೌಂದರ್ಯಾರಾಧಕ ತಾನು ಕಂಡ ಯಾವುದೇ ವಸ್ತುವಿನಲ್ಲಿ ಚಲುವನ್ನು ಅರಸುವುದೇ ಅವನ ಕರ್ತವ್ಯ ಇದಕ್ಕೆ ಕಾರಣ ಪ್ರೀತಿ, ಒಲವು ಹೆಚ್ಚು ಆಕರ್ಷಣೀಯವಾದುದು ಅದು ಪ್ರತಿಯೊಬ್ಬರನ್ನೂ ಸೂಜಿಗಲ್ಲಾಗಿ ತನ್ನತ್ತ ಸೆಳೆಯುವುದು.

22. ಡಾ. ಎಚ್.ಎಸ್. ರಾಘವೇಂದ್ರರಾವ : ನಿಲುವು ಪು. 115 ಕನ್ನಡ ಸಂಘ ಕ್ರೈಸ್ತ ಕಾಲೇಜು ಬೆಂಗಳೂರು. 1989.

ನವೋದಯ ಸಂದರ್ಭದಲ್ಲಿ ಭಾವಗೀತೆಯ ಲಕ್ಷಣವಾಗಿ ಪ್ರೇಮ ಗೀತೆಗಳು ರಚನೆಯಾದವು. ಕವಿಯ ಪರಿಭಾವನೆಯಿಂದ ರಸತ್ವಕ್ಕೇರಿದ ಭಾವ, ಹಾಗೇ ರಸತ್ವಕ್ಕೇರಿದ ಯಾವ ಭಾವವೇ ಆಗಲಿ ಕವಿಯ ವ್ಯಕ್ತಿ ನಿಷ್ಠವಾದ ಸೌಂದರ್ಯಾನುಭವದ ಗೀತವಾಗುತ್ತದೆ. ಆದುದರಿಂದ ಈ ಭಾವ ಕವಿಯ ಸೌಂದರ್ಯಾನುಭವವೇ ಹೌದು" "ಸೌಂದರ್ಯಾನುಭವವೆಂದರೆ ಕೇವಲ ಅಹ್ಲಾದಕಾರಿಯಾದ, ಸಂತೋಷಕಾರಿಯಾದ ಅನುಭವ ಎಂದಲ್ಲ. ಹರ್ಷವಾಗಲಿ ಏನೇ ಆಗಲಿ ರಸತ್ವಕ್ಕೇರಿದರೆ ಅದು ಸೌಂದರ್ಯಾನುಭವವಾಗುತ್ತದೆ"[23] ಎನ್ನುತ್ತಾರೆ ರಾಷ್ಟ್ರಕವಿ ಡಾ.. ಜಿ.ಎಸ್. ಶಿವರುದ್ರಪ್ಪನವರು.

ಗಂಡು-ಹೆಣ್ಣುಗಳ ನಡುವೆ ಸೂಜಿಗಲ್ಲಿನಂತೆ ಆಕರ್ಷಿಸುವ ಪ್ರಧಾನ ವಸ್ತುಗಳಲ್ಲಿ ಪ್ರೀತಿ-ಪ್ರೇಮ-ಪ್ರಣವವೇ ಆಗಿರುವುದು ಮನುಷ್ಯನಿಗೆ ಒಲವು ಮುಖ್ಯವಾದುದು ಒಲವಿಲ್ಲದ ಹೋದರೆ ಅದು ಮರುಭೂಮಿಯ ಹಾಗೆ ಕವಯಿತ್ರಿ ಡಾ. ಪ್ರೇಮಾ ಸಿರ್ಸೆ ಅವರ ಚುಟುಕ ಒಲವು ಪ್ರೀತಿ ಕುರಿತಾದ ಒಂದು ಚುಟುಕು ಇಲ್ಲಿ ನೋಡಬಹುದು.

"ಒಲವಿಲ್ಲದ
ಹೃದಯದಲಿ
ಪ್ರೀತಿಯ
ಹನಿ
ಹುಡುಕುವುದು
ಮರಭೂಮಿಯಲಿ
ಮರೀಚಿಕೆಯ
ಬೆನ್ನಟ್ಟಿದ್ದಂತೆ"[24]

ಎಲ್ಲದಕ್ಕೂ ಪ್ರೀತಿ ಸಂಬಂಧಬೇಕೇಬೇಕು ಪ್ರೀತಿ ಜೀವರಸ ಪ್ರಾಣವಾಯು ಅದಿಲ್ಲದಿದ್ದರೆ ಬದುಕು ಮರಭೂಮಿಯಂತೆ ಇಲ್ಲಿದೆ.

ಪ್ರೀತಿ ಇಲ್ಲದೆ ಹೋದರೆ ಜೀವನವೆಲ್ಲವೂ ನಶ್ವರ ಯಾವುದೇ ಜೀವಿಯಾದರೂ ಒಂದಿಲ್ಲ ಒಂದು ವಸ್ತುವನ್ನು ಪ್ರೀತಿಸುತ್ತಿರುತ್ತದೆ. ಪ್ರತಿಯೊಬ್ಬರ ಜೀವನದಲ್ಲಿ ಪ್ರೀತಿ ಅಷ್ಟೊಂದು ಮೌಲಿಕವಾಗಿದೆ ಎರಡು ಹೃದಯ ಮನಸ್ಸುಗಳನ್ನು ಬೆಸೆಯುವುದೇ ಪ್ರೀತಿ ಅದು ಹುಡುಗ-ಹುಡುಗಿಯರಲ್ಲಿ ಸೆಳೆತವಾಗಿ ಗೋಚರವಾಗುತ್ತದೆ.

---

23. ಡಾ.ಜಿ. ಎಸ್. ಶಿವರುದ್ರಪ್ಪ : ಸೌಂದರ್ಯ ಸಮೀಕ್ಷೆ ಪು. 290 ತ.ವೆಂ. ವೆಂಕಣ್ಣಯ್ಯ ಸ್ಮಾರಕ ಗ್ರಂಥ ಮಾಲೆ, ಮೈಸೂರು 1970
24. ಡಾ. ಪ್ರೇಮಾ ಸಿರ್ಸೆ : ಹೊಸಬದುಕು ಪು. 71 ಆನಂದ ಪ್ರಕಾಶನ ಬೀದರ 2004.

ಪ್ರೀತಿಯಾರ ಮೇಲೆಯಾ ಹುಟ್ಟಬಹುದು ಯಾವುದರ ಮೇಲಾದರೂ ಹುಟ್ಟಬಹುದು. ಗಂಡಿಗೆ ಹೆಣ್ಣಿನ ಮೇಲೆ ಹೆಣ್ಣಿಗೆ ಮೇಲೆ ಹೆಣ್ಣಿಗೆ ಗಂಡಿನ ಮೇಲ ತಂದೆ-ತಾಯಿಯರ ಮೇಲೆ, ಹಾಗೆ ಒಡಹುಟ್ಟಿದವರ ಮೇಲೆ ಬಂಧುಗಳ ಮೇಲೆ ಸುಂದರ ನಿಸರ್ಗದ ಮೇಲೆ ನಾವು ಉಪಯೋಗಿಸುವ ವಸ್ತುಗಳ ಮೇಲೆ ಪ್ರೀತಿ ಹುಟ್ಟಬಹುದು"[25] ಪ್ರೀತಿ-ಪ್ರೇಮ-ಒಲವು ಇತ್ಯಾದಿ ಸೌಂದರ್ಯಾತ್ಮಕ ಸ್ವಭಾವಗಳಲ್ಲಿಯೂ ತನ್ಮಯತನದ ವಿಶಿಷ್ಟತೆಯನ್ನು ಚುಟುಕು ಕವಿಗಳು ಮೆರೆಯಲು ಸಾಧ್ಯವಾಗಿರುವುದನ್ನು ಅಧ್ಯಯನದಿಂದ ಮನನ ಮಾಡಿಕೊಳ್ಳಲು ಸಾಧ್ಯವಿದೆ. ತನ್ನನ್ನು ಆಕರ್ಷಿಸಿದವಳನ್ನು ಕವಿ ಬೆಡಗಿ ಎಂದು ಕರೆದಿರುವುದು ರೋಮ್ಯಾಂಟಿಕ ಮಧುರ ಅನುಭವ ನೀಡುತ್ತದೆ. ನಲ್ಲೆಯ ತುಂಟಾಟ, ನಗೆಯ ಚಲ್ಲಾಟ ಕವಿಯ ಮನದಲ್ಲಿ ನವಿರೇಳಿಸುವ ಭಾವ ಹೀಗೆ ಮೂಡಿಬಂದಿದೆ.

ನಲ್ಲೆಯ ಸೌಂದರ್ಯದ ಬೆಡಗಿನಲ್ಲಿಯೂ ಆಲೋಚಿಸುವ ಒಳಗೊಂದು ಸೂಕ್ಷ್ಮ ಹೃದಯವಿದೆಯೆಂದು ತಿಳಿದಾಗ ಕವಿ ವ್ಯಕ್ತಪಡಿಸುವ ಭಾವನೆಯನ್ನು ಡಾ. ಬಿ.ಬಿ. ಪೂಜಾರಿರವರ ಚುಟುಕು ಕವಿತೆಯಲ್ಲಿ ನೋಡಬಹುದು.

"ನಿನ್ನ<br>ಕಣ್ಣುಗಳನ್ನು ಕಮಲಕ್ಕೆ<br>ಮುಂಗುರುಳನ್ನು ದುಂಬಿಗೆ<br>ಮೂಗನ್ನು ಸಂಪಿಗೆಗೆ<br>ತುಟಿಯನ್ನು ತೊಂಡೆಗೆ<br>ಕಟಿಯನ್ನು ಸಿಂಹಕ್ಕೆ<br>ಎದೆಯನ್ನು ಕುಂಭಕ್ಕೆ<br>ತೊಡೆಯನ್ನು ಕಂಭಕ್ಕೆ<br>ಹೋಲಿಸುವಾಗ<br>ಹುಡುಗಿ<br>ಇವುಗಳ ಒಳಗೊಂದು ಹೃದಯವೂ<br>ಇದೆ ಎಂದು<br>ನೀನು ಯಾಕೆ ಹೇಳಲಿಲ್ಲ ?"[26]

ಪ್ರೀತಿಯನ್ನು ಮೌಲ್ಯವಾಗಿಸುವ ಚಿತ್ರ ಈ ಚುಟುಕಿನಲ್ಲಿದೆ ಹೆಣ್ಣುಗಂಡಿನ ಪ್ರೇಮ ಸ್ನೇಹಕ್ಕಿಂತಲೂ ಆಳವಾದ ಅನುಭವವನ್ನು ಡಾ. ಪೂಜಾರಿಯವರ ಕವಿತೆಗಳಲ್ಲಿ ಮೂಡಿ ಬಂದಿದೆ. ಜಗತ್ತಿನಲ್ಲಿ ಎಲ್ಲವೂ ನಶ್ವರವಾಗಿದ್ದರೂ ಪ್ರೀತಿ ಒಂದೇ ಶಾಶ್ವತ ಎನ್ನವುದನ್ನು ಡಾ. ಪ್ರೇಮಾ ಸಿರ್ಸೆ ಅವರ ಚುಟುಕಿನ ಭಿತ್ತಿಯಾಗಿರುವುದನ್ನು ಇಲ್ಲಿ ನೋಡಬೇಕು.

"ನನ್ನ ಮನದ
ಕ್ಯಾನ್ವಾಸನಲಿ
ನೀ
ಬಿಡಿಸಿದ
ಮೃದು-ಮಧುರ
ಸುಂದರ ಚಿತ್ರಗಳು
ಇಂದಿಗೂ ಮಾಸದೆ
ಉಳಿದಿವೆ"

ಇಂಥ ಸಾಲುಗಳು ಸಹೃದಯರ ಎದೆಯಲಿ ರೋಮಾಂಚನ ಸಿಂಚನ ಮಾಡಿ ಒಂದು ಕ್ಷಣ ಕುಣಿಸುವುದು. ಪ್ರೀತಿ ಪ್ರೇಮ ಕುರಿತು ಅವರ "ನೂರೊಂದು ನೆನಪು ಎದೆಯಾಳದಲ್ಲಿ" ಸಂಕಲನದ ಕವಿತೆಗಳ ಪ್ರಭಾವಳಿಯಲ್ಲಿ ಇದ್ದು ಅವುಗಳ ವಿನ್ಯಾಸ ಚಿತ್ರ ಶಕ್ತಿ ಒಂದೊಂದು ರೀತಿಯಲ್ಲಿ ಮೈದಾಳಿವೆ.

---

25. ಸಿ.ಪಿ. ಕೊಟ್ರೇಶ : ಕನ್ನಡ ಚುಟುಕು ಸಾಹಿತ್ಯ ಪು. 26 ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ 2007.
26. ಡಾ. ಬಿ.ಬಿ. ಪೂಜಾರಿ ಮೂರು ಬಣ್ಣ ನೂರು ಕವನ ಪು. 88 ವೀರೇಶ ಪ್ರಕಾಶನ ಹುಮನಾಬಾದ 1987
27. ಡಾ. ಪ್ರೇಮಾ ಸಿರ್ಸೆ ಹೊಸ ಬದುಕು ಪು. 63 ಆನಂದ ಪ್ರಕಾಶನ ಬೀದರ 2004.

ಇನ್ನೊಂದರಲ್ಲಿ
"ನಿನ್ನ
ಒಡನಾಟದಿಂದ
ನನ್ನ
ಮನ
ಮುದಗೊಂಡು
ಜಗವನ್ನು
ಮರೆಸಿ
ಕಣ್ಣಿನಲಿ
ಮಿಂಚು
ಹೊಳಸಿ
ಮೂಡಿಸುತ್ತಿವೆ
ಬದುಕಬೇಕು
ನಿನ್ನೊಡನೆ
ಬೆಟ್ಟದಷ್ಟು ! !"[28]

ದಾಂಪತ್ಯ ಜೀವನಕ್ಕೆ ಅಡಿಯಿಡುವ ಮೊದಲನೆ ಘಳಿಗೆಯ ಪ್ರಣಯ ಚಿತ್ರವನ್ನು ಕವಿಯಿತ್ರಿ ವಜ್ರಾ ಪಾಟೀಲ ಅವರು ಸೂಚ್ಯವಾಗಿ ಇಲ್ಲಿ ನಿರೂಪಿಸಿದ್ದಾರೆ. ಕನಸು ಕನವರಿಕೆಗಳಿಗೆ ಕೈಮೂಡಿಸುವ ಚಲುವೆಯ ಜೀವನದ ಗೆಳೆಯನಾಗಿ ಬಂದ ಮೇಲೆ ನಾಯಕಿಯ ಬದುಕಿನಲ್ಲಿ ಹೊಸ ಜೀವ ಬದುಕಬೇಕೆಂಬ ಬಯಕೆ ಬೆಟ್ಟವಾಗಿ ಬೆಳೆಯುತ್ತದೆ. ಎಲ್ಲವನ್ನು ಎದುರಿಸಿ ಬಾಳುವ ಬದುಕಿನ ಭರವಸೆಯಾಗಿ ಪ್ರೀತಿ ಇಲ್ಲಿ ರೂಪಗೊಂಡಿದೆ ಎಂದು ಹೇಳಬಹುದಾಗಿದೆ.

ಗಂಡು ಹೆಣ್ಣಿನ ಸಂಬಂಧ ಸೆಳೆತ ಜಿಜ್ಞಾಸೆಗೆ ವಸ್ತು ಕವಿಗಿರುವ ಆಕರ್ಷಣೆ ಅನುಭವದಿಂದ ಮೂಡಿದ ತಿಳುವಳಿಕೆ ಹೌದು ಈ ಸೆಳೆತದ ಜಿಜ್ಞಾಸೆಗಳುಳ್ಳ ಕವಿತೆಗಳನ್ನು ಕನ್ನಡದ ಪ್ರಮುಖ ಕವಿಗಳ

ಕವಿತೆಗಳ ಪಕ್ಕದಲ್ಲಿರಿಸಿ ತೂಗಿ ನೋಡಿದರೆ ಜಿಲ್ಲೆಯ ಕವಿಗಳ ಕಾವ್ಯ ಪ್ರತಿಭೆ ಅಭಿವ್ಯಕ್ತಿ ವಿಶಿಷ್ಟತೆಯ ಅರಿವಾಗುವುದು.

ಪ್ರೇಮವು ಕನ್ನಡದ ಹಿರಿಯ ಕವಿಗಳಾದ ಕುವೆಂಪು ಅವರಲ್ಲಿ ಆದರ್ಶವಾಗಿ, ಪು.ತಿ.ನ ಅವರಲ್ಲಿ ಜಿಜ್ಞಾಸೆಯ ವಸ್ತುವಾಗಿ ಬೇಂದ್ರೆಯವರಲ್ಲಿ ಅದು ಜೀವನದ ವಾಸ್ತವವಾಗಿ ಹೆಚ್ಚು ಸಂಕೀರ್ಣವಾಗಿ ಅಭಿವ್ಯಕ್ತಿ ಪಡೆದಿದೆ. ಕನ್ನಡದ ವಿಮರ್ಶಕರೊಬ್ಬರು ಈ ಕವಿಗಳಲ್ಲಿನ ಪ್ರೀತಿಯ ಅಭಿವ್ಯಕ್ತಿಯನ್ನು ವಿಶ್ಲೇಷಣೆಗೆ ಒಳಪಡಿಸಿರುವುದನ್ನು ಹೀಗಿದೆ

---

28. ವಜ್ರಾ ಪಾಟೀಲ ಮನದಾಳ ಪು. 20 ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಸಂಘ ಬೀದರ 1999.

"ಕುವೆಂಪು ಅವರದು ಸ್ವರ್ಗೀಯ ಆದರ್ಶ ಪ್ರೀತಿಯಾದರೆ (Heavenly) ಬೇಂದ್ರೆಯವರದು ಈ ನೆಲದ ಸತ್ವವನ್ನೊಳಗೊಂಡ (Earthly love) ಪ್ರೀತಿ ಆದ್ದರಿಂದಲೇ ಅವರ ಪ್ರೀತಿಗೆ ಸಿಟ್ಟು, ಸೆಡವು ಅಸಹನೆ, ಉತ್ಕಟತೆ ಎಲ್ಲವೂ ಸಾಧ್ಯ ಗಂಡು ಹೆಣ್ಣಿನ ಸಂಬಂಧ ಸಿಹಿ-ಕಹಿ, ಕಷ್ಟ-ನಷ್ಟ, ಉತ್ಸಾಹ-ಸಂಭ್ರಮ, ದುಃಖ-ವಿಷಾದ ಎಲ್ಲಾ ಭಾವಗಳೂ ಬೇಂದ್ರೆಯವರ ಕವಿತೆಗಳಲ್ಲಿ ಮೈತಾಳಿವೆ"[29] ಈ ಹೇಳಿಕೆಯ ಹಿನ್ನೆಲೆಯಲ್ಲಿ ನೋಡಿದಾಗ ಬೀದರ ಜಿಲ್ಲೆಯ ಕವಿಗಳ ರಚನೆಗಳಲ್ಲಿಯೂ ಕುವೆಂಪು ಅವರ ಆದರ್ಶ, ಪು.ತಿ.ನ ಅವರ ಜಿಜ್ಞಾಸೆ, ಬೇಂದ್ರೆಯವರ ಪ್ರೀತಿಯ ಸಂಕೀರ್ಣ ನೆಲೆಗಳು ಇರುವುದನ್ನು ಕಾಣುತ್ತೇವೆ. ಜೀವನದಲ್ಲಿ ಸೋಲು-ಗೆಲುವುಗಳು ನದಿಯ ಪ್ರವಾಹದಂತೆ ಹಗಲು-ರಾತ್ರಿಗಳಂತೆ, ನೆರಳು ಬಿಸಿಲಿನಂತೆ ಬೇವಿನ ಕಹಿ ಬೆಲ್ಲದ ಸವಿಯಂತೆ ಬಂದರೂ ಅಲ್ಲಿ ಪ್ರೀತಿಗೆ ಕೊರತೆ ಇರುವುದಿಲ್ಲ. ಪ್ರೀತಿ ಅಮರ ಸಾವನ್ನೂ ಸೋಲನ್ನು ಗೆಲ್ಲುವುದೇ ಪ್ರೀತಿಯಾಗಿದೆ.

ಪ್ರೀತಿಯ ಎರಡು ಚಿತ್ರಗಳು ಹೀಗಿವೆ.

"ಈ ಪ್ರೀತಿಯೇ ಹೀಗೆ
ಎಲ್ಲಿಂದಲೋ ಬಂದು
ಯಾವುದೋ ಕ್ಷಣದಲ್ಲಿ
ಸದ್ದುಗದ್ದಲವಿಲ್ಲದೆ
ಕದ್ದು ತೆರೆಯುವುದು
ಮನಸ್ಸಿನ ಕದ"[30]

ಹಾಗೂ

" ಈ ಪ್ರೀತಿಯೇ ಹೀಗೆ
ಕೆಲವರಿಗೆ ಸಿಹಿ ಕೆಲವರಿಗೆ ಕಹಿ
ಒಬ್ಬೊಬ್ಬರ ನಾಲಿಗೆಗೆ
ಒಂದೊಂದು ರುಚಿ ತೋರಿ
ಹೊರಟು ಹೋದ ಕ್ಷಣ
ನೆನಪು ಪ್ರತಿ ದಿನ"[31]

---

29. ಡಾ. ನರಹಳ್ಳಿ ಬಾಲ ಸಂಭ್ರಮಣ್ಯ : ಸಾಹಿತ್ಯ ಚಳುವಳಿಗಳು, ಪು. 64 (ಸಂ) ಡಾ.ಜಿ. ಎಸ್. ಶಿವರುದ್ರಪ್ಪ, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು 2000.

30. ಡಾ. ಮಲ್ಲಿಕಾರ್ಜುನ ಆಷ್ಣೆ ನಾನು-ನೀನು ಪು. 24 ನವಕ್ರಾಂತಿ ಪ್ರಕಾಶನ

31. –ಅದೇ– ಪು. 24. ಸೋನಕೇರಾ 2006.

ಕವಿಯದು ಇಲ್ಲಿನದು ಸ್ವರ್ಗೀಯ ಪ್ರೀತಿಯಾಗಿಲ್ಲ ಅದು ಈ ನೆಲದ ವಾಸ್ತವಿಕತೆಯಲ್ಲಿ ಅರಳಿ ಕುಸುಮಿಸಿರುವಂಥದ್ದು ಬದುಕಿನಲ್ಲಿ ವೈವಿಧ್ಯತೆ, ಬದಲಾವಣೆಗಳಿಲ್ಲದಿದ್ದರೆ ಅರ್ಥವಿಲ್ಲ, ಬದುಕಿನ ಈ ಎಲ್ಲ ವೈವಿಧ್ಯತೆಗಳಿಗೆ ಚಾಲಕ ಶಕ್ತಿಯನ್ನು ಈ ನೆಲದ ಹೆಣ್ಣು-ಗಂಡುಗಳಲ್ಲಿ ಕಾಣುವರೇ ಹೊರತು ಸ್ವರ್ಗದ ರಂಬೆ, ಊರ್ವಸಿ, ಮೇನಕೆಯರಂಥ ಅಪ್ಸರೆಯರಲ್ಲಿ ಅಲ್ಲ.

ಗಂಡು ಹೆಣ್ಣಿನ ಸಂಬಂಧದ ಕುರಿತು ಚಿಂತಿಸುವಾಗಲೂ ಅಷ್ಟೇ ಪ್ರೀತಿಯ ಸಫಲತೆಗೆ ಹಂಬಲಿಸುವ ಕವಿ ಬೆನ್ನು ತಿರುಗಿಸುವುದಿಲ್ಲ.

ಡಾ. ವಿಕ್ರಮ ವಿಸಾಜಿ ದಿ. ಜಯದೇವಿ ಗಾಯಕವಾಡ ಕವಿತಾ ಮಲ್ಲಪ್ಪ ವಜ್ರಾ ಪಾಟೀಲ, ಡಾ. ವಿಶಾಲಾಕ್ಷಿ ಕರಡ್ಡಿ ಡಾ. ಪ್ರೇಮಾ ಸಿರ್ಸೆ, ಡಾ. ಬಿ.ಬಿ. ಪೂಜಾರಿ ಸುನಿತಾ ಬಿರಾದಾರ ಡಾ. ಕಾಶಿನಾಥ ಅಂಬಲಗೆ ಮೊದಲಾದವರ ಚುಟುಕುಗಳಲ್ಲಿ ಹರಳುಗಟ್ಟಿವೆ.

ದಾಂಪತ್ಯದಲ್ಲಿ ಆಗೀಗ ವಿರಸ ಮುನಿಸು ತಂದೊಡ್ಡುವ ಸಮಸ್ಯೆಯನ್ನು ಪ್ರಣಯದ ವ್ಯಥೆಯನ್ನು ಕವಿಗಳೂ ಚುಟುಕುಗಳಲ್ಲಿ ಸೂಚ್ಯವಾಗಿ ನಿರೂಪಿದ್ದಾರೆ.

## ನಾಡು–ನುಡಿ ಪ್ರೇಮ :

ಪ್ರೀತಿ–ಪ್ರೇಮ ಕುರಿತು ಅನೇಕ ಈ ರೀತಿಗಳಲ್ಲಿ ಅಭಿವ್ಯಕ್ತಿ ನೀಡಿದ ಕವಿಗಳು ನಾಡು–ನುಡಿ–ಸಾಂಸ್ಕೃತಿಕ ಬಗೆಗೂ ಅದೇ ಪ್ರೀತಿ ಒಲವು ತೋರಿಸಿರುವರು. ಬಹು ಸಂಸ್ಕೃತಿಯುಳ್ಳ ಭಾರತದಂಥ ದೇಶದಲ್ಲಿ ರಾಷ್ಟ್ರೀಯತೆ, ನಾಡು, ಭಾಷೆ ಬಗೆಗೆ ಒಲವು ಮೂಡಲು ಕುವೆಂಪು, ಬೇಂದ್ರೆ ಮೊದಲಾದ ಕವಿಗಳ ಕವಿತೆಗಳು ಪ್ರೇರಣೆಯಾಗಿದ್ದಂತೆ ತೋರುತ್ತದೆ.

ಸುವರ್ಣ ಮಾಲಾ ಅವರ ಕನ್ನಡ ತಾಯಿಗೆ ಉಲ್ಲಾಸ ತನ್ನಿರಿ ಸೂರ್ಯಕಾಂತ ನಿನ್ನೇಕರ ಅವರ 'ನಾಡಗೀತೆ' "ರಾಜ್ಯೋತ್ಸವ" ಭಾರತ ಮಾತೆಯ ಪುತ್ರರೆ" ವಜ್ರಾ ಪಾಟೀಲರ 'ಭಾರತಿ' ಕರ್ನಾಟಕ ಮಾತೆ ಶ್ವೇತಾ ರಾಣಿಯವರ "ಕನ್ನಡ ನಾಡು" ನನ್ನ ದೇಶ ಎಂ.ಆರ್. ಶ್ರೀಕಾಂತ ಅವರ "ನಮ್ಮಯ ಭಾಷೆ ಚಿನ್ನದ ಭಾಷೆ" "ಕನ್ನಡಮ್ಮ" ಮೊದಲಾದ ಕವಿತೆಗಳಲ್ಲಿ ರಾಷ್ಟ್ರ ಭಕ್ತಿ, ನಾಡ ಪ್ರೇಮ ಭಾಷಾಭಿಮಾನ ಸೌಂದರ್ಯರಾಧನೆ ಹೆಮ್ಮೆ ತುಂಬಿ ತುಳುಕಿದೆ

ಉದಾ: ಭಾರತಮಾತೆಯ ವೀರ ಪುತ್ರರೆ
ದೇಶ ರಕ್ಷಣೆಗೆ ಒಂದಾಗಿ ಮುಂದೆ ಬನ್ನಿ
ಕಾಯಲು ಭಾರತ ಮಾತೆಯ ಅಭಿಮಾನ
ನೀಡಲು ಭಾರತಾಂಬೆಯ ಉನ್ನತಸ್ಥಾನ"[32]

ದೇಶ ಭವಿಷ್ಯದ ಅಭಿಮಾನ ದೃಷ್ಟಿ ಕರ್ನಾಟಕದ ನೆಲ–ಜಲ ಭಾಷೆ ಸಂಸ್ಕೃತಿ ಬಗೆಗೂ ಇದೇ ಭಾವವೇ ಉಕ್ಕಿ ಹರಿದಿದೆ. ಅಖಂಡ ಕವಿಗೆ ಕರ್ನಾಟಕ ಕೇವಲ ನೆಲವಾಗಿಲ್ಲ ಭಾಷೆ ಕೇವಲ ಭಾಷೆಯಾಗಿಲ್ಲ. ನೆಲ ಸ್ವರ್ಗ ಸದೃಶ್ಯವಾದರೆ, ಭಾಷೆ ಅದು ಜೀವಾಮೃತ ಕನ್ನಡ ಮಾತೆ ನಮ್ಮ ತಾಯಿ ಈ ತಾಯಿ ಮಡಿಲಲ್ಲಿ ಆಡಿನಲಿಯುವುದೆಂದರೆ ಕವಿಗಳಿಗೆ ಸ್ವರ್ಗ ಸುಖ ಏಕೆಂದರೆ ಕನ್ನಡ ನಾಡು ಪ್ರಾಕೃತಿಕ ಕಲೆ, ಸಾಹಿತ್ಯ ಸಂಗೀತಾದಿಗಳಿಗೆ ಗಂಗೋತ್ರಿ ಇಲ್ಲಿ ಬೇಲೂರಿನ ಶಿಲ್ಪ ಸಿರಿ ಜೋಗದ ಜಲಪಾತ ಕಡಸಲವುಳ್ಳ ಭವ್ಯತೆಯ ನೆಲೆ ಬೀಡು ಎಲ್ಲ ಸೌಂದರ್ಯವು ಇಲ್ಲಿನ ಕವಿಗಳ ಕವಿತೆಗಳಲ್ಲಿ ಅರಳಿ ಕಂಪು ಸೂಸಿದೆ.

---

**32. ಸೂರ್ಯಕಾಂತ ನಿನ್ನೇಕರ : ಬಯಕೆ ಪು. 7 ಧರಿನಾಡು ಕನ್ನಡ ಸಂಘ ಬೀದರ 2008.**

## 4.6 ಭಾಷೆ-ಶೈಲಿ -ಛಂದಸ್ಸು ಇತ್ಯಾದಿ

ಭಾಷೆ ಭಾವನೆಗಳನನು ಅಭಿವ್ಯಕ್ತಿಸುವುದಕ್ಕೆ ಇರುವ ಮಾಧ್ಯಮವಾಗಿದೆ. ಭಾಷೆ ಮಾನವನ ಸೃಷ್ಟಿಯಾದರು, ಅದು ಸಮಾಜಿಕ ಕ್ರಿಯೆಯನ್ನು ಒಳಗೊಂಡಿರುತ್ತದೆ. ವ್ಯಕ್ತಿಗೂ ಮತ್ತು ಸಮಾಜಕ್ಕೂ ಬಿಡಿಸಲಾಗದ ಅವಿನಾಭಾವ ಸಂಬಂಧವಿದೆ ಆತನು ಸಮಾಜದ ಹಲವಾರು ಜನರೊಂದಿಗೆ ಹಲವಾರು ವಿಧಗಳಲ್ಲಿ ಸಂಬಂಧಗಳನ್ನು ಹೊಂದಿರುತ್ತಾನೆ. ಅದಕ್ಕನು ಗುಣವಾಗಿ ಅನೇಕರೊಂದಿಗೆ ಆತನ ವ್ಯವಹರಿಸುವಾಗ, ತನ್ನ ಆಲೋಚನೆ, ಅನಿಸಿಕೆ, ಭಾವನೆಗಳನ್ನು ಹಂಚಿಕೊಳ್ಳವಾಗ ಬೇರೆ ಬೇರೆ ರೀತಿಯಲ್ಲಿ ಭಾಷಿಕ ಸಾಮಗ್ರಿಗಳನ್ನು ಪ್ರಯೋಗಿಸುವನು ಹಾಗೆಯೆ ಮತ್ತೊಬ್ಬರು ಹೇಳಿದ್ದನ್ನು ಅರ್ಥೈಸಿಕೊಂಡು ಅದಕ್ಕೆ ತಕ್ಕದಾದ ರೀತಿಯಲ್ಲಿ ಪ್ರತಿಕ್ರಿಯಿಸುತ್ತಾನೆ ಅದಕ್ಕೆಂದೆ ನಮ್ಮ ಪ್ರಾಚೀನ್ ಮೊದಲ ಉಪಲಬ್ಧ ಲಕ್ಷಣಗ್ರಂಥವಾದ ಕವಿರಾಜ ಮಾರ್ಗದಲ್ಲಿ, ಭಾಷೆಯ ಸಂವಹನವನ್ನು ಕುರಿತು ಹೀಗೆ ಹೇಳಲಾಗಿ.

" ಪದನರಿದು ನುಡಿಯಲು ನುಡಿ
ದುದನರಿದಾರಯಲು ಮಾರ್ಪರ್ ನಾಡವಗಳ್"

ಇದು ವ್ಯಕ್ತಿ ಹಾಗೂ ಸಮುದಾಯಗಳೊಂದಿಗೆ ನಿತ್ಯವ್ಯವಹಾರ ಮಾಡುವಾಗ ಭಾಷೆಯು ಒಬ್ಬ ಲೇಖಕ. ಕವಿಗೆ ತನ್ನ ಸಂವೇದನೆಗಳ ನಿವೇದನೆಯ ಅಗತ್ಯ ಸಾಮಗ್ರಿಯಾಗಿ ಒಳಸಲ್ಪಟ್ಟಾಗ ಅದು ಸಾಹಿತ್ಯ ರೂಪ ಪಡೆದು ಕೊಳ್ಳುತ್ತದೆ.

ಕಾವ್ಯಭಾಷೆ ಮತ್ತು ಕಾವ್ಯ ವಸ್ತುವಿನ ಕುರಿತಂತೆ ಭಿನ್ನ ಭಿನ್ನ ರೂಪ ಮತ್ತು ಪ್ರಯೋಗಗಳನ್ನು ಕುರಿತಂತೆ ಸಾಹಿತ್ಯ ಚರಿತ್ರೆಕಾರರು, ಭಾಷೆವಿಜ್ಞಾನಿಗಳು ಸಾಕಷ್ಟು ಚರ್ಚಿಸಲ್ಪಟ್ಟಿದ್ಧಾರೆ ಅವರ ವಿವರಗಳಿಗ ಇಲಲಿ ಮತ್ತೆ ಹೋಗವುದಿಲ್ಲ. ಪ್ರಸ್ತುತ ಹೊಸಗನ್ನಡ ಸಂದರ್ಭದಲ್ಲಿ ಕಾವ್ಯ ಭಾಷಾ ಪ್ರಯೋಗಗಳನ್ನು ಬೀದರ ಜಿಲ್ಲೆಯ ಚುಟುಕು ಸಾಹಿತ್ಯದ ಹಿನ್ನಲೆಯಲ್ಲಿ ಚರ್ಚೆಗೆ ತೊಡಗಿಸಿಕೊಳ್ಳಲಾಗಿದೆ.

ಹೊಸಗನ್ನಡ ಕಾವ್ಯ ತನ್ನದೇ ಆದ ಭಾಷೆ ಮತ್ತು ಛಂದೊರೋಪಗಳನ್ನು ಪ್ರಕಟಿಸಿದೆ ಕನ್ನಡ ಹಳಗನ್ನಡ, ನಡುಗನ್ನಡ, ಸಂಸ್ಕತ, ಇಂಗ್ಲೀಷ ಜನಪದ ಹಾಗೂ ಇತರ ಭಾಷಿಕ ಪ್ರಯೋಗಗಳಿಂದ ಪಾಕಗೊಂಡು ಹಲವು ಕವಿಗಳಲ್ಲಿ ವಿಭಿನ್ನ ರೂಪವನ್ನೆ ಪಡೆಯಿತು ಅದು ತನ್ನ ಹಳೇಯ ತಲೆಮಾರಿನ ಜಡಗೊಂಡು ಬೇಸರ ತಂದಿರುವ ಕಂದ, ವೃತ್ತಾದಿಗಳು ಹಳೆಯ ಕಟ್ಟು ಚೌಕಟ್ಟುಗಳನ್ನು ಮುರಿದು ಸ್ವತಂತ್ರವಾದ ತನ್ನದೇ ಆದ ಛಂದೊರೋಪಗಳನ್ನು ಸೃಷ್ಟಿಸಿಕೊಂಡು ನವ ನವೀನವಾಗಿ ಬೆಳೆದಿದೆ ಕವಿಗಳ ಹೊಸ ಹೊಸ ಪ್ರತಿಮೆ ರೂಪಕ ಪ್ರತೀಕಗಳು ಸೃಷ್ಟಿಯಾದವು ಹಿಂದಿನ ಛಂದೋಬಂಧಗಳನ್ನು ಹೊಸಗನ್ನಡ ಕವಿಗಳು ನಿರಾಕರಿಸಿದರೂ ಛಂಧೊಲಯಗಳನ್ನು ನಿಯತವಾಗಿ ಮಲನ್ನಡೆಸಿಕೊಂಡು ಬಂದದು ಹೊಸಗನ್ನಡ ಕಾವ್ಯದ ವಿಶಿಷ್ಟ ಲಕ್ಷಣ ವೆನಿಸಿದೆ ಹೊಸಗನ್ನಡ ಕಾವ್ಯದಲ್ಲಿ ಮೂರು, ನಾಲ್ಕು ಹಾಗೂ ಐದು ಮಾತ್ರ ವ್ಯವಸ್ಥೆಯನ್ನು ಪ್ರಧಾನವಾಗಿ ಗುರುತಿಸಲಾಗುತ್ತದೆ. ಈ ಕಾವ್ಯದಲ್ಲಿನ ಭಾಷೆ-ಶೈಲಿ ಮತ್ತು ಛಂದೋ ಪ್ರಯೋಗಗಳ ದೃಷ್ಟಿಯಿಂದ ಚುಟುಕು ಕವಿತೆಗಳೂ ತುಂಬ ವಿಶಿಷ್ಟವಾಗಿದೆ " ಭಾಷ

ನಿರಂತರ ಪರಿವರ್ತನ ಶೀಲವಾದುದ್ದು, ಕಾಲಕ್ಕೆ ತಕ್ಕಂತೆ ಹೊಸ ಹೊಸ ಪದಗಳನ್ನು ಸ್ವೀಕರಿಸಿಕೊಂಡು ಬೆಳೆಯುತ್ತದೆ."[33] ಅದರಲ್ಲಿ ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶ ರಾಜ್ಯಗಳ ಗಡಿಗೆ ಹೊಂದಿ ಕೊಂಡಿರುವ ಬೀದರ ಜಿಲ್ಲೆಯ ಕನ್ನಡದ ಮೇಲೆ ಪ್ರಾದೇಶಿಕವಾಗಿ ಮರಾಠಿ, ತೆಲುಗು, ಭಾಷೆಗಳು ಐತಿಹಾಸಿಕವಾಗಿ ಉರ್ದು ಪರ್ಶಿಯನ್, ಅರೇಬಿಕ್ ಭಾಷೆಗಳ ಪ್ರಭಾವ ಆಗಿರುವುದನ್ನು ಕಾಣುತ್ತೇವೆ ಹೀಗಾಗಿ ಜಿಲ್ಲೆಯ ಕಾವ್ಯ, ಸಣ್ಣಕಥೆ, ಕಾದಂಬರಿ ಹಾಗೂ ಮತ್ತಿತರ ಸೃಜನಶೀಲ ಸಾಹಿತ್ಯ ಪ್ರಕಾರಗಳ ಮೇಲೆ ಇವೆಲ್ಲ ಭಾಷೆಗಳ ದಟ್ಟ ಪ್ರಭಾವ ಆಗಿರುವುದು ಇದಕ್ಕೆ ಚುಟುಕು ಸಾಹಿತ್ಯವೂ ಹೊರತಾಗಿಲ್ಲವೆಂದು ಹೇಳಬೇಕು.

ಬೀದರನ್ನು ಬಹುಕಾಲ ಬಹಮನಿ ಅರಸರು ಹೈದ್ರಾಬಾದಿನ ನಿಜಾಮರು ಆಳಿದ್ದರಿಂದ ಅವರ ಆಡಳಿತ ಭಾಷೆಯಾದ ಉರ್ದು ಇಲ್ಲಿ ಜನರ ಭಾಷೆಯಾಗಿಯೂ ನಿತ್ಯವವಹಾರದಲ್ಲಿ ಬಾಸಲ್ಪಡುತ್ತಿದ್ದುವುದನ್ನು ಒಂದು ಕವಿತೆಯಲ್ಲಿ ಹೀಗೆ ಕಾಣಬಹುದು.

". ನಮ್ಮ
ದೋಸ್ತ ಸಾಯ್ಬೇಕಂತ
ಕುತಗಿಗಿ ಫಾಸಿ ಹಾಕ್ಕೊಂಡುನು
ಧಡಲ್ ಅಂತ
ಕಡಕೊಂಡ ಬಿದ್ದನು
ಕಿಲಾಲ್ ತಿಂದುನು
ಟಿಕ್ ಟೊಂಟಿ ಕುಡುದುನು
ಮುಸುಕ ಹೊಡದ ಮಕ್ಕೊಂಡುನು
ಹಾದಿ ಕಾಯ್ದುನು
ಮರದಿನ
ಹ್ಯಾಂಗಿದ್ಪಾಂಗೆ ಎದ್ದುನು"[34]

ಕವಿತೆಯಲ್ಲಿ ಬಂದಿರುವ ದೊಸ್ತ, ಫಾಸಿ, ದಡಲ್, ಕಿಲಾಲ್, ಮೊದಲಾದವು ಉರ್ದು ಮತ್ತು ಪಾರ್ಶಿ ಪದ ಪುಂಜಿಗಳಾಗಿವೆ. ಬೀದರ ಆಡು ಮಾತಿನಲ್ಲಿ ಉಕಾರಯುಕ್ತ ಹಾಗೂ ಪದಾಂತ್ಯ ಧೀರ್ಘ ಹಾಗೂ ನಾಬಿ ನೀಬೀ ಅವರ ಬೀ ಎನ್ನುವ ಪ್ರತ್ಯಯ ಪದಗಳನ್ನು ಹೇರಳಾಗಿ ಕಾಣುತ್ತೇವೆ.

ಹ್ರಸ್ವಾಂತ್ಯ ಪದಗಳನ್ನು ದೀರ್ಘಾಂತ್ಯದಲ್ಲಿ ಖಳುಸುವುದಕ್ಕೆ ಉದಾಹರಣೆ ಡಾ॥ ಕಾಶಿನಾಥ ಅಂಬಲಗೆ ಅವರು ಚುಟುಕು ನೋಡ ಬಹುದು.

---

33. ಪ್ರೊ. ಸೂರಯ್ಯ ಹಿರೇಮಠ : ಬೀದರ ಉತ್ಸವ ಪು. 34 ಜಿಲ್ಲಾ ಸಂಸ್ಕೃತಿ ಪರಿಷತ್ ಬೀದರ 2006.

34. ಡಾ. ಬಿ.ಬಿ. ಪೂಜಾರಿ : ಮೂರು ಬಣ್ಣ ನೂರು ಕವನ ಪು.10 ವೀರೇಶ ಪ್ರಕಾಶನ ಹುಮನಾಬಾದ 1987.

" ನಡಿದಾಡಾ ಹೆಣಾಗಳ್ರಿ ನಾವು
ಸ್ವಾಮೀ,
ಖದ್ದ
ಗಿರಾಕಿಗಳಿಲ್ಲರೆ
ಪಾಪುಲರ್ ಟ್ರೇಡ್-ಮಾರ್ಕಿನ
ಹೆಸರಿನಡಿದಾನ
" ಮುಲು"
ಮಾರುತ್ತೇನೆ
ನಾವು-
ನಡಿದಾಡಾ ಹೆಣಾಗಳ್ರಿ ಸ್ವಾಮೀ"[35]

ಇಲ್ಲಿ ನಡೆದಿದೆ ಎನ್ನವುದು ನಡದಾದಾ, ಹೆಣಗಳು ಎಂಬುದು ಹೆಣಾಗಳ್ರಿ ನಡೆದಿದ್ದಾನೆ ಎನ್ನುವುದು ನಡಿದಾನ ಎಂಬುದಾಗಿರುವುದನ್ನು ಕಾಣಬೇಕು ಕ್ರಿಯಾಪದ , ಅವ್ಯಯಪರಗಳು ಸಂಬಂಧ ವಾಚಕ ಪದಗಳು ಸಂಖ್ಯಾ ವಾಚಕಪದಗಳು ಮುಂತಾದವುಗಳೂ ಇಲ್ಲಿನ ಕನ್ನಡದಲ್ಲಿ ದೀರ್ಘಗಳಾಗಿ ಬಳಕೆ ಯಾಗುತ್ತವೆ. ಉದಾ : ಕ್ರಿಯಾಪದಗಳಲ್ಲಿ ಹಸಣೆ, ಹಸಣಾ, ಗಾಣೆ 7 ಗಣಾ ಜೀಣೆ – ಜೀಣಾ ಕರಣೆ- ಕರಣಾ.

ಅವ್ಯಯಪದಗಳು –ಡೋಳ-ಡೋಳಾ, ತಂಡ-ತಂಡಾ ಪೋಟ- ಪೋಟಾ, ದಂಡ-ದಂಡಾ. ಪಾಯ-ಪಾಯಾ.

<u>ನಾಮಪದಗಳು</u> :- ರಾಮು-ರಾಮ್ಯಾ, ಶಂಕರ-ಶಂಕ್ಯಾ, ಬಸವ-ಬಸವಾಮ ಜಹಿರ-ಜಹಿರಾ

<u>ಅನ್ವರ್ಥಕನಾಮ :-</u> ಖೂಳ-ಖೂಳಾ, ಲಿಂಗಡ್ – ಲಿಂಗಡಾ ದಂಡ- ದಂಡಾ, ಇತ್ಯಾದಿಗಳು.

<u>ಆನಪದಗುಡಿಗಟ್ಟುಗಳು :-</u> ಹೋರಗಿನ ಗಾಳಿ ಮುಖ ಕೆಡಸಿ, ಮೇಲ್ಮುಖದ ಮನುಷಾ, ಕಳೆಮುಖದ ಮನಷಾ ಹಲ್ಲುಖಿಸಿದೆ, ಟ್ರೇಡ್ ಮಾರ್ಕ, ಅಡಕ್ಕೊತ್ತ ಆಗ್ಯಾರ ಬಾಳಿಖೀಳ್ತಾರ

<u>ಸಂಖ್ಯಾ ವಾಚಗಳು :-</u> ಏಕ, ದೋನಿ, ತೀನಿ, ಚಾರಿ, ಪಂದ್ರಾ ಶೆಂಬೋರಿ, ಹಜಾರ, ದಾಹಜಾರ.

ಹೀಗೆ ಕನ್ನಡ ಪದಗಳ ಜೋತೆಯಲ್ಲಿ ಅನ್ನಭಾಷಿಕ ಪದ ಗುಂಪುಗಳು ದಿನ ನಿತ್ಯ ವ್ಯವಹಾರ ಹಾಗೂ ಕಾವ್ಯ ಭಾಷೆಗಳಾಗಿರುವುದನ್ನು ಚುಟುಕುಗಳಲ್ಲಿ ಯಥೇಚ್ಚೆಯಾಗಿ ಕಾಣುವೆವು.

---

35. ಡಾ. ಕಾಶಿನಾಥ ಅಂಬಲಗೆ : ಮೂವತ್ತೈದು ಕವನಗಳು ಪು. 6 ಪ್ರಗತಿ ಪ್ರಕಾಶನ ಬ.ಕಲ್ಯಾಣ 1995.

ಛಂದೋ ಪ್ರಯೋಗಗಳು:-

ಹೊಸಗನ್ನಡ ಕಾವ್ಯ ಪ್ರಾಚೀನ ಛಂದೋ ಬಂಧಗಳನ್ನು ನಿರಾಕರಿಸಿದ್ದರೂ ಅಲ್ಲಿನ ಛಂದೋಲಯಗಳನ್ನು ಉಳಿಸಿ ಕೊಂಡಿದೆಯೆಂತಲೇ ಹೇಳಬೇಕು ಕನ್ನಡ ಕಾವ್ಯಗಳ ಮೇಲೆ ಇಂಗ್ಲೀಷ, ಉರ್ದು ಹಾಗೂ ಇತರ ಭಾಷಿಕ ಛಂದೋಲಯಗಳು ಪ್ರಭಾವ ಬೀರಿರುವುದನ್ನು ಜಿಲ್ಲೆ ಕಾವ್ಯ ಹಾಗೂ ಚುಟುಕುಗಳ ಅಧ್ಯಯನದಿಂದ ಕಂಡು ಕೊಳ್ಳಲು ಸಾಧ್ಯವಾಗುತ್ತದೆ.

ಹೊಸಗನ್ನಡ ಕಾವ್ಯದಲ್ಲಿ ಹೊಸ ಛಂದೋ ಮಾರ್ಗದ ಹೆದ್ದಾರಿಯನ್ನೇ ನವೋದಯ ಕವಿಗಳು ಸೃಷ್ಟಿಸಿದ್ದು ಅದರಲ್ಲೂ ಬಿ.ಎಂ. ಶ್ರೀ ಕುವೆಂಪು ಮೊದಲಾದವರ ಹೆಸರು ಚಿರಸ್ಥಾಯಿಗೊಳಿಸಿದೆ ಶ್ರೀಯವರ ಇಂಗ್ಲೀಷ ಗೀತೆಗಳು ಹೊಸ ಕಾವ್ಯ ಮಾರ್ಗವನ್ನು ತೆರೆದು ತೋರಿಸಿದ್ದಲ್ಲದೆ, ಹೊಸ ಕನ್ನಡ ಛಂದಸ್ಸನ್ನು ದಾಟಿಯನ್ನು ಕಾಣಿಸಿತು ಹೊಸ ಚೈತನ್ಯ ಹರಿ ಯುವುದಕ್ಕೆ ಹೊಸ ಪಾತ್ರವನ್ನೇ ನಿರ್ಮಿಸಿತು. ಹೊಸಗನ್ನಡದ ಬಗೆ ಬಗೆಯ ಮಟ್ಟಗಳಿಗೆ ನವೋದಯ ಕವಿಗಳು ನಿರ್ಮಾಟಪಕರಾಗಿದ್ದಾರೆ. ನವೋದಯ ಕವಿಗಳು ತೋರಿದ ಮಾರ್ಗದಲ್ಲಿ ಕನ್ನಡದ ಬಹುತೇಕ ಎಲ್ಲ ಘಟ್ಟಗಳಲ್ಲಿ ಬರೆಯುತ್ತಿರುವ ಕವಿಗಳಲ್ಲಿ ಪ್ರಯತ್ನ ಪೂರ್ವಕವೋ ಇಲ್ಲದೇ ಸಹಜವಾಗಿಯೋ ಹೊಸ ಹೊಸ ಛಂದೋಲಯಗಳ ಪೋಷಿಸಿಕೊಂಡೇ ಬಂದಿರುವುದನ್ನು ಅಲ್ಲಗಳೆಯಲಾಗದು.

ಪ್ರಾಸಗಳಿಗೆ ಜೋತುಬಿದ್ದು ಕಾವ್ಯ ಬರೆಯುವುದನ್ನು ಹೊಸಗನ್ನಡ ಕವಿಗಳು ನಿರಾಕರಿಸಿದರೂ ಅರ್ಥ ಸೊಬತೆಲಯದ ಓತ ಪ್ರೋತ-ಚಲನಗೆ ಅಡತಡೆಯಿಲ್ಲದಂತೆ ಪ್ರಾಸ ಬಳಕೆಯನ್ನು ಅವರು ನಿರಾಕರಿಸಲಿಲ್ಲ ವೆಂಬುದನ್ನೂ ಮರೆಯಬಾರದು ಅಂತಹ ಕೆಲವು ಉದಾಹರಣೆಗಳನ್ನು ಚುಟುಕುಗಳಲ್ಲಿ ಕಾಣತ್ತೇವೆ.

ಆದಿ ಪ್ರಾಸಕ್ಕೆ ಉದಾ:-
" ನಿನ್ನ ಮನದ ಬಿಸಿಯುಸಿರು
ನನ್ನ ಹೃದಯಕ್ಕೆ ತಾಟಿ
ನಿನ್ನ ಕೆಂದವರೆಯ ಮುಖಕೆ"
( ಎಂ.ಜಿ.ದೇಶ ಪಾಂಡೆ ಅವರ ಬಯಕೆ ಕವಿತೆ)

ಅಂತ್ಯ ಪ್ರಾಸಕ್ಕೆ ಉದಾ:-
" ಯಾವುದು ನನ್ನದು
ಯಾವುದು ನಿನ್ನದು
ಎಲ್ಲವು ಅವನದು"
ಹೊಸ ಕವಿಯ ಉಳಿವುದು ಒಂದೆ ಕವಿತೆ)

ಒಳಪ್ರಾಸಕ್ಕೆ ಉದಾ:-

ಬುಗುರಿಯ ಹಾಗೆ ತಿರುಗುವ ಭೂಮಿ
ಗರಗರ ಗರಗರ ಕಕ್ಷದ ಮೇಲೆ
ತನ್ನಯ ಸುತ್ತ ಒಂದು ದಿವಸ
ಸೂರ್ಯಾನ ಸುತ್ತ ಒಂದು ವರುಷ"

(ಸುನಿತಾ ಬಿರಾದಾರ ಅವರ ಭೂಮಿ ಕವಿತೆ)

ಚುಟುಕುಗಳಲ್ಲಿ ಹೆಚ್ಚಾಗಿ 3,4,5, ಹಾಗೂ 6 ಮಾತ್ರೆಗಳನ್ನು ಎರಡು, ಮೂರು, ನಾಲ್ಕು ಪದಗಳಿರುವ ಕೆಲಮೊಮ್ಮೆ ಕ್ವಚಿತ್ತಾಗಿ 7- (3+4) 8 (5+3) ರಂತೆ ಮಾತ್ರೆಗಳ ಪಾದಗಳನ್ನು ಕಾಣುವೆವು . ಈ ನುಸಿಗಳು ಪಾದ ರಚನೆಯ ದೃಷ್ಟಿಯಿಂದ ಸಮ, ಅರ್ಥ ಸಮ ಮತ್ತು ವಿಷಯ ರೀತಿಯಲ್ಲಿಯೂ ಪ್ರಯೋಗಗಳಾಗಿರುವವು.

**ಮೂರು ಮಾತ್ರೆಯ ಪಾದಗಳು**

| | | |
|---|---|---|
| ರಾಮ ರಹಿಮ | – | 3+3 |
| ಅಣ್ಣ ತಮ್ಮ | – | 3+3 |
| ಎಂದು | | 3 |
| ಹೇಳಿರುವ ನಾಡಿಯಲ್ಲಿ | – | 3+3 3+3 |
| ಜಗಳ ಸಹಜ | – | 3+3 |
| ತಾನೆ | – | 3 |
| ಸೇಬು ಹಣ್ಣು ಅಲ್ಲ ನಿನ್ನ ಗಲ್ಲ | – | 3+3+3+3+3 |
| ಅನ್ನ ಬೇಡ ನನ್ನ ನಲ್ಲ | – | 3+ 3+ 3+ 3 |

ಡಾ॥ ಮಲ್ಲಿಕಾರ್ಜುನ ಆಮ್ಣೆ ಅವರ ' ಗಲ್ಲ ಕವಿತೆ

**4 ಮಾತ್ರೆ:-**

| | | |
|---|---|---|
| ಮಲ್ಲನೆ ಹೂದುಟಿ | – | 4+4 |
| ಯತೆ ತೆರೆದು | – | 4 |
| ಕಿಲ ಕಿಲ ಕಿಲನಗು ತರಲಿರಲು | | 4+4+4 |

5 ಮಾತ್ರಗಳು :-

| | | |
|---|---|---|
| ಮಾಡಿದರೆ ಪ್ರವಾಸ | – | 6+6 |
| ಮಕ್ಕಳಿಗೆ ಉಲ್ಲಸ | – | 5+5 |

6 ಮಾತ್ರಗೆ :-

| | | |
|---|---|---|
| ಕಾಲಚಕ್ರ ಸುರುಳಿ ಸುರುಳಿ | – | 6+6 |
| ತಿರಗಿ ಹಗಲು ರಾತ್ರಿ ಸೂರ್ಯ | – | 6+6 |

ವಿಷಯ ನಿರೂಣೆಯ ಉದ್ದೇಶಕ್ಕಾಗಿ, ಕವಿತೆಗಳು ಮಾತ್ರಲಯ ವಿಧಾನವನ್ನು ಅನುಸರಿಸಿ ಚುಟುಕುಗಳನ್ನು ಅನುಸರಿಸಿರುವುದನ್ನು ವಿಶೇಷವಾಗಿ ಕಾಣವೆವು ಅಲ್ಲದೆ ಉರ್ದು, ಇಂಗ್ಲೀಷ ಕೆಲವು ಛಂದೋ ಮಾದರಿಗಳನ್ನು ಕನ್ನಡಕ್ಕೆ ತರುವುದ ಕವಿತೆಗಳ ಪ್ರಯೋಗ ಶಿಲಿತೆಯನ್ನು ಪ್ರತಿಭೆಯ ವಿರಾಟ್ ದರ್ಶನ ಮಾಡಿಸುತ್ತದೆ ಎಂದು ಹೇಳಬೇಕಾಗುತ್ತದೆ.

## ಅಧ್ಯಾಯ – 5

## ಸಮಾರೋಪ

ಸಾವಿರಾರು ವರ್ಷಗಳಿಗೂ ಸುದೀರ್ಘ ಇತಿಹಾಸ ಹೊಂದಿರುವ ಕನ್ನಡ ಸಾಹಿತ್ಯ ಆಯಾ ಕಾಲದ ರಾಜಕೀಯ, ಧಾರ್ಮಿಕ, ಸಾಮಾಜಿಕ ಭಾಷಿಕ ಸಾಂಸ್ಕೃತಿಕ ಮುಂತಾದ ಕಾರಣಗಳಿಂದ ಬದಲಾವಣೆಗೊಳಗಾಗುತ್ತ ಬಂದಿರುವುದು. ಈ ಬದಲಾವಣೆಗೆ ಆಯಾ ಕಾಲದ ಜನರೂ ಸ್ಪಂದಿಸುತ್ತ ಬಂದಿರುವರು. ಈ ಎಲ್ಲ ಕಾರಣಗಳನ್ನು ಮುಂದಿಟ್ಟುಕೊಂಡೇ ಕನ್ನಡ ಸಾಹಿತ್ಯ ಚರಿತ್ರೆಯನ್ನು ರೂಪಿಸಲಾಗಿದೆ. ಅದರಲ್ಲಿಯೂ ಪಂಪನಿಂದ ಮುದ್ದಣನವರೆಗಿನ ಸಾಹಿತ್ಯವನ್ನು ಪ್ರಾಚೀನ ಕನ್ನಡ ಸಾಹಿತ್ಯವೆಂತಲೂ, ಮುದ್ದಣನಿಂದ ಈವರೆಗೆ ಬೆಳೆದು ಬಂದಿರುವುದನ್ನು ಆಧುನಿಕ ಕನ್ನಡ ಅಥವಾ ಹೊಸಗನ್ನಡ ಸಾಹಿತ್ಯವೆಂತಲೂ ಕರೆಯಲಾಗುತ್ತದೆ.

ಇಂದಿನ ಹೊಸಗನ್ನಡವು ಪಾಶ್ಚಾತ್ಯ ಸಾಹಿತ್ಯ ಹಾಗೂ ಇತರೆ ಜ್ಞಾನ ಶಾಖೆಗಳಿಂದ ಬೆಳೆದು ಬಂದಿದೆ. ಹೀಗಾಗಿ ಸಾವಿರಾರು ವರ್ಷಗಳ ಕನ್ನಡ ಸಾಹಿತ್ಯದಲ್ಲಿಯೇ ಹೊಸಗನ್ನಡ ಸಾಹಿತ್ಯವು ತುಂಬ ವಿಶಿಷ್ಟವಾಗಿದೆ. ಕಳೆದ ಏಳೆಂಟು ದಶಕಗಳ ಈ ಅವಧಿಯಲ್ಲಿ ಹೊಸಗನ್ನಡವು ನವೋದಯ ಪ್ರಗತಿಶೀಲ, ನವ್ಯ ದಲಿತ–ಬಂಡಾಯ ಹಾಗೂ ಬಂಡಾಯೋತ್ತರ ಸಾಹಿತ್ಯ ಚಳುವಳಿಗಳಿಂದ ವೈವಿಧ್ಯಮಯವಾಗಿ ಬೆಳೆದ ಶ್ರೀಮಂತವಾಗಿದೆ. ಅಲ್ಲದೆ ಅದು ಅನೇಕ ಪ್ರತಿಭಾವಂತ ಕವಿ, ಸಾಹಿತಿಗಳನ್ನು ಕನ್ನಡ ಸಾಹಿತ್ಯಕ್ಕೆ ಕೊಡುಗೆಯಾಗಿ ಕೊಟ್ಟಿದೆ. ಇಷ್ಟೊಂದು ಪ್ರಮಾಣದ ಕವಿ, ಸಾಹಿತಿಗಳನ್ನು ಸಾಹಿತ್ಯ ಪ್ರಕಾರಗಳನ್ನು ಹೊಸಗನ್ನಡ ಸಾಹಿತ್ಯ ಹೊರತುಪಡಿಸಿ ಮತ್ತಾವ ಕಾಲದಲ್ಲೂ ಕಾಣಲಾರೆವು.

ಹೊಸಗನ್ನಡ ಸಾಹಿತ್ಯವು ಕವಿತೆ ಭಾವಗೀತೆ, ಚುಟುಕು ಕವಿತೆ ಕಥನ ಕಾವ್ಯ, ಮಹಾಕಾವ್ಯ, ಸಣ್ಣಕಥೆ, ಕಾದಂಬರಿ, ನಾಟಕ ಜೀವನ ಚರಿತ್ರೆ, ಪ್ರವಾಸ, ವೈಚಾರಿಕ, ವಿಮರ್ಶೆ ಮುಂತಾದ ಪ್ರಕಾರಗಳಿಂದ ಶ್ರೀಮಂತವಾಗಿದೆ. ಅದಲ್ಲಿ ಚುಟುಕು ಕಾವ್ಯ ಸಾಹಿತ್ಯವೂ ಒಂದಾಗಿದೆ.

ಚುಟುಕ ಸಾಹಿತ್ಯವು ಅದರ ಹೆಸರೇ ಹೇಳುವಂತೆ ಚಿಕ್ಕದಾದ ಪದ್ಯ ರೂಪವಾಗಿದ್ದು; ಅದಕ್ಕೆ ತನ್ನದೇ ಆದ ಲಕ್ಷಣಗಳನ್ನು ಹೊಂಬಿದೆ ಚುಟುಕ ಸಾಹಿತ್ಯದ ಲಕ್ಷಣಗಳನ್ನು ಹೀಗೆ ನೋಡಬಹುದಾಗಿದೆ.

1) ಚಿಕ್ಕ ಚಿಕ್ಕ ಸಾಲುಗಳಲ್ಲಿ ಸೂಚ್ಯವಾಗಿ ಹೇಳುವುದು.

2) ಗಾತ್ರದಲ್ಲಿ ಕಿರಿದಾದರೂ ಹಿರಿದಾದ ಅರ್ಥವನ್ನು ಹೊಂದಿರುವುದು.

3) ಹದವಾದ ಮಿತವಾದ ಶಬ್ದಗಳ ಜೋಡಣೆ.

4) ಪ್ರಾಸ ಪದಗಳು ಚುಟುಕಿನ ಜೀವಾಳ:

5) ಹಾಸ್ಯ ಮಿಶ್ರಿತ ವಿಡಂಬಣೆ ಅದರ ಇನ್ನೊಂದು ಪ್ರಮುಖ ಲಕ್ಷಣ

6) ಕಡಿಮೆ ಸಾಲು, ಪದಗಳಲ್ಲಿ ವಿಚಾರಗಳನ್ನು ಹೇಳುವ ಚುಟುಕು ಓದುಗರನ್ನು ಹೆಚ್ಚು ವಿಚಾರಕ್ಕೆ ಹಚ್ಚುತ್ತದೆ.

7) ಚುಟುಕು ಬಿಗಿಯಾದ ಛಂದಸ್ಸನ್ನು ಹೊಂದಿರುತ್ತದೆ.

8) ನಿರೂಪಣೆಯ ಮಿತವ್ಯಯ

9) ಅನ್ಯೋಕ್ತ

10) ಶಬ್ದ ಸುಭಗತ

11) ಉದ್ದೇಶಿತ ಅರ್ಥವನ್ನು ಸಮರ್ಥವಾಗಿ ಧ್ವನಿಸುವುದು.

ಚುಟುಕುಗಳನ್ನು ಮುಕ್ತಕ, ಹನಿಗವನ, ಮಿನಿಗವನ ಕಿರುಕವಿತೆ, ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ. ಚುಟುಕು ಬೇರೆ ಬೇರೆ ಹೆಸರುಗಳ ಅಭಿಮಾನ ಹೊಂದಿದ್ದರೂ ಅದರ ಬಳಕೆ, ಉದ್ದೇಶ ಹಾಗೂ ಪರಿಣಾಮಗಳಲ್ಲಿ ಮಾತ್ರ ವ್ಯತ್ಯಾಸವನ್ನು ಕಾಣಲಾರೆವು. ಚುಟುಕು ಅಥವಾ ಮುಕ್ತಕ ಸಾಹಿತ್ಯದ ಹುಟ್ಟಿನ ಇತಿಹಾಸ ತುಂಬ ಪ್ರಾಚೀನ ಕಾಲಕ್ಕೆ ಹೋಗುತ್ತದೆ. ವೇದ, ಉಪನಿಷತ್ತು ಸ್ಮೃತಿಗಳಲ್ಲಿ ಮುಕ್ತಗಳು ಬಿಡಿ ಬಿಡಿಯಾಗಿ ಬಳಸಿರುವುದನ್ನು ಭಾರತೀಯ ಅಲಂಕಾರಿಕರು ಗುರು ತಿಳಿಸಿದ್ದಾರೆ. ಅಲ್ಲದೆ ತುಂಬ ಪ್ರಾಚೀನವಾದ ನಮ್ಮ ಜನಪದ ಸಾಹಿತ್ಯದಲ್ಲಿಯೂ ಇಂಥ ಬಿಡಿ ಬಿಡಿಯಾದ ಮುಕ್ತಕಗಳನ್ನು ಹೋಲುವ ತ್ರಿಪದಿಗಳು ರಚನೆಯಾಗಿರುವುದನ್ನು ಬಲ್ಲೆವು. ಸಂಸ್ಕೃತದಲ್ಲಿ ಚುಟುಕುಗಳಿಗೆ 'ಚಾಟು' ಎಂದು ಕರೆಯುತ್ತಾರೆ. ಸಂಸ್ಕೃತ ಹೊರತುಪಡಿಸಿ ತಮಿಳು, ತೆಲುಗು ಇತರ ಭಾಷೆಗಳಲ್ಲಿ ಇಂಥ ಚಾಟು ಪದ್ಯಗಳು ದೊರೆಯುತ್ತವೆ. ಕನ್ನಡ ಸಾಹಿತ್ಯವೂ ಇದಕ್ಕೆ ಹೊರತಾಗಿಲ್ಲ. ಒಂದರ್ಥದಲ್ಲಿ ಶಿವಶರಣರ ವಚನಗಳು ಹರಿದಾಸರ ಸುಳಾದಿ, ಯೋಗಭೋಗ ಸರ್ವಜ್ಞನ ತ್ರಿಪದಿ, ಸಂಚಿ ಹೊನ್ನಮ್ಮನ ಪದ್ಯಗಳು, ಹರಿಹರನ ಶತಕಗಳು ಮುಕ್ತಕಗಳೇ ಆಗಿರುವುದು.

ಹೊಸಗನ್ನಡ ಸಾಹಿತ್ಯದಲ್ಲೂ ಚುಟುಕುಗಳ ರಚನೆಯಾಗಿವೆ. ಇಲ್ಲಿನ ಚುಟುಕುಗಳು ನಮ್ಮ ಪ್ರಾಚೀನ ಸಾಹಿತ್ಯ ಮತ್ತು ಇಂಗ್ಲೀಷ ಸಾಹಿತ್ಯಗಳೆರಡರ ಪ್ರೇರಣೆಗಳಿಂದ ರಚನೆಯಾಗಿವೆ ಎಂದು ಹೇಳಬಹುದು.

ಹೊಸಗನ್ನಡ ಸಾಹಿತ್ಯವನ್ನು ಅವಲೋಕನ ಮಾಡಿದಾಗ ಬಹುಪಾಲು ಕನ್ನಡ ಕವಿಗಳು ತಮ್ಮ ಕಾವ್ಯ ರಚನೆಯ ಜೊತೆ ಜೊತೆಯಲ್ಲಿ ಚುಟುಕುಗಳನ್ನು ಬರೆದಿರುವುದನ್ನು ಕಾಣುತ್ತೇವೆ.

ಹೊಸಗನ್ನಡದಲ್ಲಿ ಚುಟುಕುಗಳ ಮುಖಾಂತರ ತಮ್ಮ ಕಾವ್ಯಾಭಿವ್ಯಕ್ತಿ ನೀಡಿದವರಲ್ಲಿ ದಿನಕರ

ದೇಸಾಯಿ ಪ್ರಮುಖ ಕವಿಗಳಾಗಿದ್ದಾರೆ. ಕಾವ್ಯಾಸಕ್ತಿಯನ್ನು ಕೆರಳಿಸುವ ಈ ಪ್ರಕಾರದ ಕಾವ್ಯವನ್ನು 60ರ ದಶಕದಲ್ಲಿ ದೇಸಾಯಿಯವರು ಪ್ರಾರಂಭಿಸಿದರು. ಅವರ 'ಹೂಗೊಂಚಲು' ಚುಟುಕುಗಳ ಸಂಕಲನ ಕನ್ನಡ ಕಾವ್ಯಾದಲ್ಲಿ ಹೊಸ ಸಂಚಲನವನ್ನುಂಟು ಮಾಡಿತು ಅನೇಕರು ದೇಸಾಯಿಯವರನ್ನು ಅನುಸರಿಸಿ ಕಾವ್ಯ ರಚನೆಗೆ ಇಳಿದರು ಹೀಗಾಗಿ ಚುಟುಕ ಸಾಹಿತ್ಯಕ್ಕೆ 'ದಿನಕರ ದೇಸಾಯಿಯವರನ್ನು' 'ಚುಟುಕು ಬ್ರಹ್ಮ' ಎಂತಲೇ ಕರೆಯಲಾಗುತ್ತದೆ.

ಆಧುನಿಕ ಕನ್ನಡದ ನವೋದಯದಿಂದ ಹಿಡಿದು ಇಂದಿನ ಬಂಡಾಯೋತ್ತರ ಕಾಲದವರೆಗೂ ಅನೇಕ ಕವಿಗಳು ಚುಟುಕು ಅಥವಾ ಹನಿಗವನಗಳನ್ನು ರಚಿಸಿ ಸಂಕಲನ ರೂಪದಲ್ಲಿ ಪ್ರಕಟಿಸಿರುವುದನ್ನು ನೋಡಿದರೆ ಈ ಸಾಹಿತ್ಯ ಪ್ರಕಾರದ ಜನಪ್ರಿಯತೆ ಎಷ್ಟೆಂಬುದನ್ನು ಎತ್ತಿ ತೋರಿಸುತ್ತದೆ. ಇದರಿಂದ ಪ್ರಸ್ತುತ ಪ್ರಬಂಧದ ವಸ್ತುವಾಗಿರುವ ಬೀದರ ಜಿಲ್ಲೆಯ ಚುಟುಕ ಕವಿಗಳನ್ನು ಹೊರತುಪಡಿಸುವಂತಿಲ್ಲ.

ಬೀದರ ಜಿಲ್ಲೆಯ ಸಾಹಿತ್ಯಿಕ ವಲಯದಲ್ಲಿ ಗುರುತಿಸಿಕೊಂಡ ಡಾ. ಬಸವರಾಜ ಸಬರದ, ಡಾ. ಕಾಶಿನಾಥ ಅಂಬಲಗೆ, ಡಾ. ವಿಜಯಶ್ರೀ ಸಬರದ, ಡಾ. ಪ್ರೇಮಾ ಸಿರ್ಸೆ, ಡಾ. ವಿಕ್ರಮ ವಿಸಾಜಿ, ಡಾ. ಜಿ.ಜಿ. ಪೂಜಾರ, ಡಾ. ಮಲ್ಲಿಕಾರ್ಜುನ ಆಮ್ಲೆ ಕವಿತಾ ಮಲ್ಲಪ್ಪ ಡಾ. ಜಯದೇವಿ ಗಾಯಕವಾಡ, ಗವಿಸಿದ್ದಪ್ಪ ಪಾಟೀಲ ಪ್ರೊ. ಸೂಗಯ್ಯ ಹಿರೇಮಠ, ಅಲ್ಲದೆ ಕೆಲವರು ಅಲ್ಲಲ್ಲಿ ಸಾಂದರ್ಭಿಕವಾಗಿಯೂ ಚುಟುಕುಗಳನ್ನು ಬರೆದು ಈ ಕ್ಷೇತ್ರದಲ್ಲಿ ಗುರುತಿಸಿಕೊಂಡಿದ್ದಾರೆ. ಡಾ. ಮಾಣಿಕರಾವ ಧನಶ್ರೀ ವಿ.ಚ ವೀರಣ್ಣಗೌಡ ಮಂತಾಳ, ಎಂ.ಜಿ. ದೇಶಪಾಂಡೆ, ಡಾ. ಬಸವರಾಜ ಬಲ್ಲೂರ, ಮ.ಮಾ. ಬೋರಾಳಕರ, ಚನ್ನಮ್ಮ ವಲ್ಲೆಪೂರೆ, ವಜ್ರಾ ಪಾಟೀಲ, ನಾಗಶೆಟ್ಟಿ ಪಾಟೀಲ, ಚಂದ್ರಗುಪ್ತ ಚಾಂದಕವಟೆ ಹಾಗೂ ಹೊಸಬರಾಗಿ ಈ ಕ್ಷೇತ್ರವನ್ನು ಪ್ರವೇಶಿಸಿ ಹೆಸರು ಮಾಡಿರುವ ಹಂಸಕವಿ, ಶಿರೋಮಣಿ ತಾರೆ ಶಿವರಾಜ ಪಾಟೀಲ ರೇವಣಸಿದ್ಧಪ್ಪ ವಾಂಜರಖೇಡ, ಬಾಬುರಾವ ಗಾದಗಿ ಶಿವುಕುಮಾರ ಕಟ್ಟೆ ನಾಗಮೂರ್ತಿ ಮೂರ್ತಿ ಪಂಚಾಳ, ಸುನಿತಾ ಬಿರಾದಾರ, ಮಂಗಲಾ ಕಸರೆ ಮುಂತಾದ ಉದಯೋನ್ಮುಖ ಕವಿಗಳ ಪಟ್ಟಿ ಸುಧೀರ್ಘವಾಗಿ ಬೆಳೆಯುತ್ತದೆ.

ಇತ್ತೀಚೆಗೆ ಉದಯೋನ್ಮುಖ ಯುವಕವಿಗಳೂ ಚುಟುಕಿನ ಮೂಲಕವೇ ಸಾಹಿತ್ಯ ಕ್ಷೇತ್ರಕ್ಕೆ ಕಾಲಿಡುತ್ತಿದ್ದಾರೆ. ಅಂತಹ ಕವಿಗಳು ತಮ್ಮ ವೈವಿಧ್ಯಮಯ ಚುಟುಕುಗಳನ್ನು ರಚಿಸಿ, ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆ ಹಾಗೂ ಅಲ್ಲಲ್ಲಿ ಅಂಥಾಲಜಿಗಳಲ್ಲಿ ಪ್ರಕಟಸಿ ಜಿಲ್ಲೆಯ ಚುಟುಕು ಸಾಹಿತ್ಯವನ್ನು ಹುಲುಸುಗೊಳಿಸಿರುವರು.

ಇಷ್ಟೊಂದು ಹುಲುಸಾಗಿ ಬೆಳೆದಿರುವ ಚುಟುಕು ಸಾಹಿತ್ಯವನ್ನು ಅನೇಕ ನೆಲೆಗಳಲ್ಲಿ ಅಧ್ಯಯನ ಮಾಡುವುದು ಇಂದಿನ ಅಗತ್ಯವಾಗಿದೆ. ಆದ್ದರಿಂದ ಈ ಪ್ರಬಂಧದಲ್ಲಿ ಚುಟುಕು ಸಾಹಿತ್ಯವನ್ನು

ಪ್ರಕೃತಿ
ಸಮಾಜ
ವ್ಯಕ್ತಿ
ವಿಡಂಬನೆ

ಸಾಹಿತ್ಯ ಸೌಂದರ್ಯ ಹಾಗೂ ಭಾಷೆ, ತಂತ್ರ, ಶೈಲಿ ಛಂದಸ್ಸು ಇವುಗಳ ಪ್ರಯೋಗಗಳ ವೈವಿಧ್ಯತೆ ಮುಂತಾದ ನೆಲೆಗಳಿಂದ ನೋಡಲಾಗಿದೆ. ಇಂಥ ವರ್ಗೀಕರಣ ಅಧ್ಯಯನಕ್ಕೊಂದು ಶಿಸ್ತು ಬದ್ಧತೆ ಉಂಟು ಮಾಡಬಲ್ಲುದು ಮಾತ್ರವಲ್ಲದೆ ಅದಕ್ಕೊಂದು ತಾತ್ವಿಕ ಪಾತಳಿಯನ್ನು ನಿರ್ಮಿಸಿಕೊಡಬಲ್ಲುದೆಂದು ನನ್ನ ನಂಬಿಕೆಯಾಗಿದೆ.

ಹೊಸಗನ್ನಡ ಕಾವ್ಯದ ಪ್ರಮುಖ ನಾಲ್ಕು ಘಟ್ಟಗಳಲ್ಲಿ ಹಾಯ್ದು ಬಂದ ಚುಟುಕು ಕವಿತೆಗಳನ್ನು ಅವುಗಳಲ್ಲಿನ ಮೂಲಭೂತ ಕಾವ್ಯ ಪರಿಧಿಯ ಸ್ಪಂದನಗಳನ್ನು ಸಂಕೀರ್ಣತೆಗಳನ್ನು ಆಯಾ ಪ್ರಮುಖ ಸನ್ನಿವೇಶದಲ್ಲಿಯೇ ಅವಲೋಕನೆಗೆ ಈಡು ಮಾಡುತ್ತ ಅದರ ವೈಶಿಷ್ಟ, ವೈರುದ್ಯಗಳನ್ನು ಎತ್ತಿ ಸ್ಪಷ್ಟೀಕರಿಸುತ್ತ ಬರಲಾಗಿದೆ. ಮತ್ತೊಮ್ಮೆ ಈ ಸಂದರ್ಭದ ಹಂತದಲ್ಲಿ ಅವುಗಳನ್ನು ಎತ್ತಿ ಕಾಣಿಸುವುದು. ನಿರ್ಣಯಿಸುವುದು ಪುನರಾವರ್ತನೆಯೆನಿಸುವುದಾದರೂ ಅನಿವಾರ್ಯವೆನೋ ಈ ಪ್ರಬಂಧದ ಚೌಕಟ್ಟಿನೊಳಗೆ ಗಮನಿಸಿದ ಬೀದರ ಜಿಲ್ಲೆಯ ಚುಟುಕು ಸಾಹಿತ್ಯದ ಕೆಲವು ಮಹತ್ವ ಪೂರ್ಣ ವೈಶಿಷ್ಟ್ಯಗಳನ್ನು ಹೀಗೆ ಸೂತ್ರೀಕರಿಸಿ ಉಲ್ಲೇಖಿಸಬಹುದು.

1) ಪ್ರಭಾವಿ ಮೂಲಗಳನ್ನು ಸ್ವಾತಂತ್ರ್ಯ ಮೂಲಗಳನ್ನಾಗಿಸುವ ಪ್ರಯತ್ನ ಸೂಕ್ಷ್ಮ ಕಾಳಜಿ.
2) ವೈಯಕ್ತಿಕ ನೆಲೆಯಿಂದಲೇ ಪ್ರಕೃತಿ ಸಮಾಜ ಇನ್ನಿತರಗಳೊಡನೆ ಕ್ರಿಯೆಗೊಳ್ಳುವ ಸೆಣಸಾಟ.
3) ಸಂಸ್ಕೃತಿ ಮತ್ತು ಸಾಂಸ್ಕೃತಿಕ ಪ್ರಜ್ಞೆಯ ವಾಹಕವಾಗುವ ಕಾವ್ಯ ಕ್ರಿಯೆಗಳು.
4) ಕಾವ್ಯ ಸತ್ವ ಮತ್ತು ಲೋಕ ಸತ್ಯಗಳ ಸಾಮರಸ್ಯ.
5) ಜೀವನದ ಮೂಲ ತತ್ವಗಳನ್ನು ಕಾವ್ಯ ತತ್ವಗಳಾಗಿಸುವ ಚಿಂತನ ಶೀಲತೆ.
6) ವಸ್ತು ಮತ್ತು ಅದರ ವರ್ಣನೆಯ ಕ್ರಮದಲ್ಲಿ ಕವಿಗಳು ತೋರಿದ ಅಗಾಧ ಎಚ್ಚರ.
7) ಕಾವ್ಯ ಮತ್ತು ಬದುಕಿನ ನಡುವಿನ ಅಭಿನ್ನ ಸಂಬಂಧ.
8) ಎಲ್ಲ ಸಾಹಿತ್ಯ ಚಳುವಳಿಗೂ ಪ್ರತಿ ಸ್ಪಂದಿಸಿ ಯಾವ ಪರಂಪರೆಯ ಬದ್ಧತೆಗೆ ತಮ್ಮನ್ನು ಕಟ್ಟಿಕೊಳ್ಳದೆ ಮಾನವೀಯ ಮೌಲ್ಯಗಳನ್ನು ಕಟ್ಟುವಲ್ಲಿ ಮೆರೆಯಿಸಿದ ವೈಶಿಷ್ಟ್ಯ.
9) ಕಲಾತ್ಮಕತೆ, ಕಾವ್ಯ ವಿಲಾಸ, ವೈವಿಧ್ಯ, ಪೂರ್ಣವಾದ ಅನುಭವದ ಚಿತ್ರ ಕ್ರಿಯೆಗಳನ್ನು ಕಟ್ಟುವುದು.

10) ವ್ಯಕ್ತಿ ಚಿತ್ರಣಗಳಲ್ಲಿ ತೋರಿದ ಕಲಾಮಗ್ನತೆ.

ಇತ್ಯಾದಿ ಪ್ರಮುಖ ಕಾಳಜಿಗಳನ್ನು ಪ್ರತಿಯೊಂದು ಅಧ್ಯಾಯದ ತರ್ಕದಲ್ಲಿ ವಿಶ್ಲೇಷಣೆಗೆ ಬಳಗು ಮಾಡಲಾಗಿದೆ.

ಅಲ್ಲದೆ, ಇನ್ನೂ ಕಾವ್ಯಾತ್ಮಕವಾಗಿ ಸೋಲರಿಯದ ಪುನರಾವರ್ತನೆಯ ಕೊರಕಲಿಗೆ ಬೀಳದ, ಸತ್ವದ ದೃಷ್ಟಿಯಿಂದ ಪ್ರಮುಖವಾದ ಬೀದರ ಜಿಲ್ಲೆಯ ಚುಟುಕು ಸಾಹಿತ್ಯ ಕಾವ್ಯ ಸೃಷ್ಟಿಯ ಉತ್ತುಂಗವಾದ ಶಿಖರ ಶ್ರೇಣಿಯತ್ತಲೇ ಸಾಗುತ್ತಿರುವಾಗ ಅಂತಿಮವಾಗಿ 'ಇದಮಿಥಂ' ಎಂದು ಹೇಳಲಿಕ್ಕೆ ಆಗುವುದಿಲ್ಲ. ಆದರೂ ಕಾವ್ಯ ಕುತೂಹಲಗಳನ್ನು ಶ್ರೇಷ್ಠತೆಗಳನ್ನು ಕುರಿತು ಎಲ್ಲವನ್ನೂ ಹೇಳಲಾಗಿದ್ದರೂ ನನ್ನ ಗಮನಕ್ಕೆ ನಿಲುಕಿದಷ್ಟನ್ನು ಅಧ್ಯಯನದ ಸಾಧ್ಯತೆಗಳ ಓನ್ನೆಲೆಯಲ್ಲಿ ಚರ್ಚೆಗೊಳಪಡಿಸಿ ನೋಡಿದ್ದೇನೆ ಎಂದು ಮಾತ್ರ ಹೇಳಬಲ್ಲೆ.

## ಅನುಬಂಧ – 1

## ಅಧ್ಯಯನಕ್ಕೆ ಬಳಸಿದ ಕೃತಿಗಳು


1) ಬೆಳಕು – ಚನ್ನಮ್ಮ ವಲ್ಲೆಪೂರೆ ಧರಿನಾಡು ಕನ್ನಡ ಸಾಹಿತ್ಯ ಸಂಘ ಕೇಂದ್ರ ಸಮಿತಿ (ರಿ) ಬೀದರ 2005.

2) ಹಾಹಾಕಾರ – ಹಂಸಕವಿ . . . . 2001

3) ಇದು ಒಂದು ಮಹಾಭಾರತ – ಡಾ. ಪ್ರೇಮಾ ಸಿರ್ಸೆ ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ ಗುಲಬರ್ಗಾ 1988.

4) ಕಸ್ತೂರಿ ಕನ್ನಡ – ಸೂರ್ಯಕಾಂತ ಪಿ.ನಿನ್ನೇಕರ. ಧರಿನಾಡು ಕನ್ನಡ ಸಾಹಿತ್ಯ ಸಂಘ ಕೇಂದ್ರ ಸಮಿತಿ (ರಿ) ಬೀದರ 2007.

5) ಮನದಾಳ – ವಜ್ರಾ ಪಾಟೀಲ ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಸಂಘ ಬೀದರ 1999.

6) ಪಯಣ – ವೀರಣ್ಣ ಕೆ. ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಸಂಘ ಬೀದರ 1999.

7) ಅನ್ವೇಷಣ – ಎಂ.ಜಿ. ದೇಶಪಾಂಡೆ ಖಿದ್ಕೆ ಪ್ರಕಾಶನ ಬೀದರ 1994.

8) ಕಾವ್ಯಮಾಲಾ – ಸುವರ್ಣ ಮಾಲಾ ದೀಕ್ಷಿತ್ ಧರಿನಾಡು ಕನ್ನಡ ಸಾಹಿತ್ಯ ಸಂಘ ಕೇಂದ್ರ ಸಮಿತಿ (ರಿ) ಬೀದರ 2007.

9) ಹನಿಜೇನು – ವಿ.ಎಚ್. ವೀರಣ್ಣ ಮಂಠಾಳಕರ ಪ್ರಕಾಶನ ಮಂಠಾಳ 2003.

10) ಬದುಕು – ಹಂಸಕವಿ ಧರಿನಾಡು ಕನ್ನಡ ಸಾಹಿತ್ಯ ಸಂಘ ಕೇಂದ್ರ ಸಮಿತಿ (ರಿ) ಬೀದರ 2007.

11) ಬಯಕೆ – ಸೂರ್ಯಕಾಂತ ನಿನ್ನೆಕರ ಧರಿನಾಡು ಕನ್ನಡ ಸಾಹಿತ್ಯ ಸಂಘ ಕೇಂದ್ರ ಸಮಿತಿ (ರಿ) ಬೀದರ 2008.

12) ಸುಪ್ರಭಾತ – ಮಂಗಲಾ ವಿ. ಕಪರೆ ಧರಿನಾಡು ಕನ್ನಡ ಸಾಹಿತ್ಯ ಸಂಘ ಕೇಂದ್ರ ಸಮಿತಿ (ರಿ) ಬೀದರ 2006.

13) ಹೂದೂಟ – ಸುನಿತಾ ಬಿರಾದಾರ ಧರಿನಾಡು ಕನ್ನಡ ಸಾಹಿತ್ಯ ಸಂಘ ಕೇಂದ್ರ ಸಮಿತಿ (ರಿ) ಬೀದರ 2008.

14) ಸುಭೋದಯ – ಎಂ.ಆರ್. ಶ್ರೀಕಾಂತ ಧರಿನಾಡು ಕನ್ನಡ ಸಾಹಿತ್ಯ ಸಂಘ ಕೇಂದ್ರ ಸಮಿತಿ (ರಿ) ಬೀದರ 2007.

15) ಚೈತ್ರ – ವಜ್ರಾ ಪಾಟೀಲ ಧರಿನಾಡು ಕನ್ನಡ ಸಾಹಿತ್ಯ ಸಂಘ ಕೇಂದ್ರ ಸಮಿತಿ (ರಿ) ಬೀದರ 2004.

16) ಅರಿವು – ಶಿರೋಮಣಿ ತಾರೆ ಧರಿನಾಡು ಕನ್ನಡ ಸಾಹಿತ್ಯ ಸಂಘ ಕೇಂದ್ರ ಸಮಿತಿ (ರಿ) ಬೀದರ 2005.

17) ಸಾಮ್ರಾಜ್ಯ – ನಾಗಶೆಟ್ಟಿ ಪಾಟೀಲ ಪ್ರೀತಿ ಪ್ರಕಾಶನ ಬೀದರ 1999.

18) ಮಿಡಿತ – ಚಂದ್ರಗುಪ್ತ ಚಾಂದ ಕವಟೆ ತೇಜಸ್ವಿ ಪ್ರಕಾಶನ ಬೀದರ 2004.

19) ಮರ – ವಜ್ರಾ ಪಾಟೀಲ ಖಿಡ್ಕೆ ಪತ್ರಿಕೆ ಪ್ರಕಾಶನ ಬೀದರ 1994.

20) ಮನಸ್ಸು – ಶಿವರಾಜ ಪಾಟೀಲ ಶೀತಲ ಪ್ರಕಾಶನ ಸಂತಪೂರ 2001.

21) ತಾಯಿ – ಶ್ವೇತಾರಾಣಿ ದೇಶಮುಖ ಶಾಹಿನ ಶಾಲೆ ಮತ್ತು ಪ.ಪು. ಕಾಲೇಜು ಬೀದರ 2007.

22) ನೆನಪಿನ ಹಂದರ – ಮ.ಮಾ. ಬೋರಳಕರ ಆನಂದ ಪ್ರಕಾಶನ ಬೀದರ 1997.

23) ನೆನಪು – ಶಿವಕುಮಾರ ಕಟ್ಟೆ ಖಡ್ಕೆ ಪ್ರಕಾಶನ ಬೀದರ 1993.

24) ಮೂರು ಬಣ್ಣ ನೂರು ಕವನ– ಡಾ. ಬಿ.ಬಿ. ಪೂಜಾರಿ ವಿರೇಶ ಪ್ರಕಾಶನ ಹುಮನಾಬಾದ 1995.

25) ಚುಕ್ಕಿಗಳು – ಡಾ. ಪ್ರೇಮಾ ಸಿರ್ಸೆ ಆನಂದ ಪ್ರಕಾಶನ ಬೀದರ 1990.

26) ಹೊಸ ಬದುಕು – ಡಾ. ಪ್ರೇಮಾ ಸಿರ್ಸೆ ಆನಂದ ಪ್ರಕಾಶನ ಬೀದರ 2004.

## ಅನುಬಂಧ

## ಗ್ರಂಥ ಋಣ



| | | |
|---|---|---|
| 1. | ಅನಂತ ನಾರಾಯಣ ಎಸ್. | ಕನ್ನಡ ಕಾವ್ಯದ ಮೇಲೆ ಇಂಗ್ಲೀಷ ಗೀತೆಗಳ ಪ್ರಭಾವ, ರಾಜಲಕ್ಷ್ಮಿ ಪ್ರಕಾಶನ, ಬೆಂಗಳೂರು 1979. |
| 2. | ಅನಂತ ಮೂರ್ತಿ ಯು.ಆರ್. | ಪ್ರಜ್ಞೆ ಮತ್ತು ಪರಿಸರ ಅಕ್ಷರ ಪ್ರಕಾಶನ, ಸಾಗರ 1971 |
| 3. | " " " | ಸಮಕ್ಷಮ |
| 4. | ಅಶೋಕ ಟಿ.ಪಿ. | ವಾಸ್ತವವಾದ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು 1990 |
| 5. | ಆಮೂರ ಜಿ.ಎಸ್. | ಅರ್ಥ ಲೋಕ ಸ್ನೇಹ ಪ್ರಕಾಶನ, ಬೆಂಗಳೂರು 1989. |
| 6. | ಕೀರ್ತಿನಾಥ ಕುರ್ತುಕೋಟಿ | ರೊಮ್ಯಾಂಟಿಸಿಜಂ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು 1989 |
| 7. | ಕುವೆಂಪು | ದಾರ್ಶನಿಕ ಕಾವ್ಯ ಮೀಮಾಂಸೆ ವಿಶ್ವ ಕನ್ನಡ ಸಾಹಿತ್ಯ ಸಮ್ಮೇಳನ ಸಾಹಿತ್ಯ ಮಾಲೆ, ಬೆಂಗಳೂರು 1989. |
| 8. | ಕೃಷ್ಣಕುಮಾರ ಸಿ.ಪಿ. | (ಅನು) ಸಾಹಿತ್ಯ ಪ್ರವೇಶ ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ ಬೆಂಗಳೂರು 1975. |
| 9. | ಕೃಷ್ಣಮೂರ್ತಿ ಬಿ. | (ಸಂ) ಅನ್ಯಜ್ಞಾನ ಶಿಸ್ತುಗಳ ಮೂಲಕ ಕನ್ನಡ ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು 1992. |
| 10. | ಗಿರಡ್ಡಿ ಗೋವಿಂದ ರಾಜ | ನವ್ಯ ವಿಮರ್ಶೆ ಅಕ್ಷರ ಪ್ರಕಾಶನ, ಸಾಗರ, 1975 ಕನ್ನಡ ನವೋದಯ ಕಾವ್ಯ; ಮಂಗಳೂರ ಕೇಂದ್ರ, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು 2001. |
| 11. | ಗುರುಲಿಂಗ ಕಾಪಸೆ | ಮಧುರ ಚೆನ್ನರ ಜೀವನ ಹಾಗೂ ಕೃತಿಗಳ ಸಮೀಕ್ಷೆ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ 1979. |
| 12. | ಗುಂಡಣ್ಣ ಕಲಬುರ್ಗಿ | ಕಣವಿ ಮತ್ತು ಆಧುನಿಕ ಕಾವ್ಯ ಪರಂಪರೆ ಸೌಜನ್ಯ ಪ್ರಕಾಶನ, ಮೂಡಲಗಿ 2000. |

| 13. | ಗೋಕಾಕ ವಿ. ಕೃ. | ನವ್ಯತೆ ಸುರಚಿ ಪ್ರಕಾಶನ, ಮೈಸೂರು 1975 |
|---|---|---|
| 14. | ” ” ” | ನವ್ಯತೆ ಹಾಗೂ ಕಾವ್ಯ ಜೀವನ ಸುರಚಿ ಪ್ರಕಾಶನ, ಮೈಸೂರು 1955. |
| 15. | ಚನ್ನವೀರ ಕಣವಿ | ಸಾಹಿತ್ಯ ಚಿಂತನ ಆನಂದ ಪಬ್ಲಿಕೇಷನ್ ಹುಬ್ಬಳ್ಳಿ 2003. |
| 16. | ” ” ” | ಮಧುರ ಚೆನ್ನ ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು 2003. |
| 17. | ಜವರಯ್ಯಾ ಮ.ನ. | ಪರಂಪರೆ ಮತ್ತು ದಲಿತ ಬಂಡಾಯ ಸಾಹಿತ್ಯ ಸಿದ್ದಾರ್ಥ ಗ್ರಂಥ ಮಾಲೆ, ಮೈಸೂರು 1994. |
| 18. | ನರಹಳ್ಳಿ ಬಾಲಸುಬ್ರಮಣ್ಯ | ಇಹದ ಪರಿಮಳದ ಹಾದಿ ಅಂಕಿತ ಪುಸ್ತಕ, ಬೆಂಗಳೂರು 2009 ನೆಲದ ಸಂಸ್ಕೃತಿ. |
| 19. | ” ” ” | ನೆಲದ ಸಂಸ್ಕೃತಿ ಸುಮುಖ ಪ್ರಕಾಶನ, ಬೆಂಗಳೂರು 2009. |
| 20. | ನಾಗಭೂಷಣ ಡಿ. ಎಸ್. | (ಸಂ) ಹಣ್ಣತೆ ಲೋಹಿಯಾ ಪ್ರಕಾಶನ, ಬಳ್ಳಾರಿ, 2001. |
| 21. | ನಾಗಭೂಷಣ ಓ. ಎಲ್. | ವಿಮರ್ಶೆಯ ಪರಿಭಾಷೆಯಲ್ಲಿ ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ 1983. |
| 22. | ನಾಗರಾಜ ಡಿ. ಆರ್. | ಅಮೃತ ಮತ್ತು ಗರುಡ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು 1990. |
| 23. | ನಾಗರಾಜ ಡಿ. ಆರ್. | ಶಕ್ತಿಶಾರದೆಯ ಮೇಳ ಅಕ್ಷರ ಪ್ರಕಾಶನ, ಸಾಗರ, 1982. |
| 24. | ನಾಯಕ ಜಿ. ಎಚ್. | ಸಮಕಾಲೀನ ಅಕ್ಷರ ಪ್ರಕಾಶನ, ಸಾಗರ, 1993. |
| 25. | ” ” ” | ವಿಮರ್ಶೆ ವಿನಯ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು. 1991. |
| 26. | ” ” ” | ನಿರಪೇಕ್ಷ |
| 27. | ನಿಸಾರ್ ಅಹ್ಮದ ಕೆ. ಎಸ್. | ಅಕ್ಷರ ಪ್ರಕಾಶನ ಸಾಗರ, 1985 ಇದು ಬೆರಗಲ್ಲೇ ಅಣ್ಣ ಐ.ಬಿ. ಎಚ್. ಪ್ರಕಾಶನ, ಬೆಂಗಳೂರು. 1980. |

| | | |
|---|---|---|
| 28. | ಪುರುಷೋತ್ತಮ ಬಿಳಿಮಲೆ | ದಲಿತ-ಬಂಡಾಯ ಸಾಹಿತ್ಯ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು 1989. |
| 29. | ಪೋತೆ ಎಚ್.ಟಿ. | ದಲಿತಾಂತರಂಗ ತಿಪ್ಪಣ್ಣಂಬು ಪ್ರಕಾಶನ, ಗುಲಬರ್ಗಾ 2004. |
| 30. | ಪ್ರಭು ಶಂಕರ | ಸಾಹಿತ್ಯ ವಿಶ್ವವಿದ್ಯಾಲಯ, ಬೆಂಗಳೂರು. 1981. |
| 31. | " " " | ಭಾವಗೀತೆ ಸುರಚಿ ಪ್ರಕಾಶನ, ಮೈಸೂರು 1982. |
| 32. | ಬಸವರಾಜ ಸಬರದ | ಹೊಸದಿಕ್ಕು ಪಲ್ಲವಿ ಪ್ರಕಾಶನ, ಬೀದರ 1990 |
| 33. | ಬಸವರಾಜ ಪೋಲಿಸ ಪಾಟೀಲು | ಸಂಸ್ಕೃತಿ ಶೀಲರು ಅಮರ ಪ್ರಕಾಶನ, ಗುಲಬರ್ಗಾ 2005. |
| 34. | ಬಸವರಾಜ ಸಾದರ | ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯ ಘಟ್ಟಗಳು. ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ 2002. |
| 35. | ಲಕ್ಷ್ಮೀ ನಾರಾಯಣ ಎನ್.ಎಸ್. | ಹೊರಳು ದಾರಿಯಲ್ಲಿ ಕಾವ್ಯ ಅಕ್ಷರ ಪ್ರಕಾಶನ, ಸಾಗರ, 1970. |
| 36. | ಲೋಕೇಶ ಅಗಸನ ಕಟ್ಟೆ | ಕನ್ನಡ ಕಾವ್ಯ ಸಮಾಜ ಸಂಸ್ಕೃತಿ ಆಲೋಕ ಪ್ರಕಾಶನ, ಚಿತ್ರದುರ್ಗ 2003. |
| 37. | ಲಂಕೇಶ ಪಿ. | ಅಕ್ಷರ ಹೊಸ ಕಾವ್ಯ ಅಕ್ಷರ ಪ್ರಕಾಶನ, ಸಾಗರ, 1970. |
| 38. | ವೀರಣ್ಣ ಸಿ. | ಕನ್ನಡ ಪ್ರತಿಭಟನಾ ಕಾವ್ಯ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು 1991. |
| 39. | ವೆಂಕಟೇಶ ಮೂರ್ತಿ ಎಚ್.ಎಸ್. | ಹೊಸ ಕಾವ್ಯದ ಮುನ್ನಲೆ ಭಾಗ-1 ಸುಂದರ ಪ್ರಕಾಶನ, ಧಾರವಾಡ 1983. |
| 40. | ಶಿವರುದ್ರಪ್ಪ ಜಿ. ಎಸ್. | ಗತಿಬಿಂಬ ಸುರಚಿ ಪ್ರಕಾಶನ, ಮೈಸೂರು 1970. |

| | | |
|---|---|---|
| 41. | ” ” ” | ಕನ್ನಡ ವಿಮರ್ಶೆಯ ನೆಲೆ-ಬೆಲೆ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. 1975. |
| 42. | ಶಿವರುದ್ರಪ್ಪ, ಜಿ.ಎಸ್. ಕೆ.ವಿ. ನಾರಾಯಣ | ಕಾವ್ಯಾರ್ಥ ಪದಕೋಶ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. 1974. |
| 43. | ಶಿವರುದ್ರಪ್ಪ ಜಿ. ಎಸ್. | ಸೌಂದರ್ಯ ಸಮೀಕ್ಷೆ ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು 1970. |
| 44. | ” ” ” | ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. 1972. |
| 45. | ” ” ” | ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು ಬೆಂಗಳೂರು ವಿಶ್ವ ವಿದ್ಯಾಲಯ, ಬೆಂಗಳೂರು. 1992. |
| 46. | ” ” ” | ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯಗಳು ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. 1981. |
| 47. | ಶ್ರೀಕಂಠಯ್ಯಾ ತೀ. ನಂ. | ಕಾವ್ಯ ಸಮೀಕ್ಷೆ ಕಾವ್ಯಾಲಯ, ಪ್ರಕಾಶನ, ಮೈಸೂರು 1998. |
| 48. | ಸಿದ್ಧಲಿಂಗಯ್ಯ ಜಿ.ಎಸ್. | ಹೊಸಗನ್ನಡ ಕಾವ್ಯ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು 1990. |
| 49. | ಹರಿದಾಸ ಭಟ್ಟ ಕು.ವೆ. | ಅಭಿವ್ಯಕ್ತಿ ಕರ್ನಾಟಕ ಸಂಘ, ಉಡುಪಿ, 1998. |
| 50. | ಹಿರೇಮಠ ಎ.ಬಿ. | ಕಣವಿ ಹಾಗೂ ಶಿವರುದ್ರಪ್ಪ ಅವರ ಕಾವ್ಯಾ ತೌಲನಿಕ ವಿವೇಚನೆ ಕರ್ನಾಟಕ ಸಂಘ ಬೆಲ್ಲದ ಕಾಲೇಜ ಮುಂಡರಗಿ, 1991. |

ಪತ್ರಿಕೆಗಳು :

1) ಅಭಿನವ

2) ಕನ್ನಡ ನುಡಿ

3) ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ.

4) ಪ್ರಬುದ್ಧ ಕರ್ನಾಟಕ

5) ಸಂಕ್ರಮಣ

6) ಬಸವ ಪಥ

7) ಸಾಧನೆ

8) ಸ್ವಪ್ನ ಲೋಕ

9) ಕನ್ನಡಪ್ರಭ ಸಾಪ್ತಾಹಿಕ

10) ಪ್ರಜಾವಾಣಿ ಸಾಪ್ತಾಹಿಕ

11) ಸುಧಾ ವಾರ ಪತ್ರಿಕೆ

12) ಕರ್ಮವೀರ ವಾರ ಪತ್ರಿಕೆ

